# ಕನ್ನಡ ವಿಶ್ವವಿದ್ಯಾಲಯ, ಹಂಪಿ



ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಸಂಶೋಧನಾ ಪ್ರಬಂಧ

# ಕನ್ನಡದ ಎರಡು ಮಹಿಳಾ ಆತ್ಮಕಥನಗಳ ಸಾಂಸ್ಕೃತಿಕ ಅಧ್ಯಯನ

ಸೌಮ್ಯ ಎಸ್.
ಸಂಶೋಧನಾ ವಿದ್ಯಾರ್ಥಿ

ರಿ.ನಂ: ಕೆ.ವಿ.ಎಂ.ಬಿ.ಕೆ.ಎಸ್- 00614 -2013

**ಮಾರ್ಗದರ್ಶಕರು**

**ಡಾ॥ ಬಿ.ಯು.ಸುಮಾ**
ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ವಿಜಯನಗರ, ಬೆಂಗಳೂರು-40.







ಕಾವ್ಯಮಂಡಲ
ಬೆಂಗಳೂರು
**2012-2013**

# ಧೃಡೀಕರಣ ಪತ್ರ

ಸೌಮ್ಯ.ಎಸ್ ಇವರು **'ಕನ್ನಡದ ಎರಡು ಮಹಿಳಾ ಆತ್ಮಕಥನಗಳ ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಧೃಡೀಕರಿಸುತ್ತೇನೆ.

27/7/13

ಮಾರ್ಗದರ್ಶಕರು

ಡಾ. ಬಿ.ಯು.ಸುಮಾ ಎಂ.ಎ.,ಪಿಎಚ್.ಡಿ.,
ಸಹಪ್ರಾಧ್ಯಾಪಕರು, ಕನ್ನಡ ವಿಭಾಗ,

ಡಾ.ಬಿ.ಯು.ಸುಮಾ
ಸಹ ಪ್ರಾಧ್ಯಾಪಕರು,
ಕನ್ನಡ ಸ್ನಾತಕೋತ್ತರ ಕೇಂದ್ರ,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ವಿಜಯನಗರ, ಬೆಂಗಳೂರು-೪೦.

1081

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ **'ಕನ್ನಡದ ಎರಡು ಮಹಿಳಾ ಆತ್ಮಕಥನಗಳ ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ಡಾ.ಬಿ.ಯು.ಸುಮಾ, ಸಹ ಪ್ರಾಧ್ಯಾಪಕರು, ಕನ್ನಡ ಸ್ನಾತಕೋತ್ತರ ಕೇಂದ್ರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ದಿನಾಂಕ : 27/7/2013

ಸ್ಥಳ : ಬೆಂಗಳೂರು

**ಸೌಮ್ಯ. ಎಸ್**

ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

**ಪೀಠಿಕೆ :**

ಆತ್ಮಕಥನ, ಆತ್ಮ ನಿವೇದನೆ, ಜೀವನ ಚರಿತ್ರೆ, ಜೀವನದರ್ಶನ ಹೀಗೆ ಬೇರೆ ಬೇರೆ ಹೆಸರುಗಳಿಂದ ಕರೆಯುವ ಈ ಸಾಹಿತ್ಯ ಪ್ರಕಾರ ಲಿಂಗ ತಾರತಮ್ಯವಿಲ್ಲದ ಅಥವಾ ಲಿಂಗ ಬೇಧವಿಲ್ಲದ ಅನುಭವಗಳ ಅಭಿವ್ಯಕ್ತಿಗೆ ಕೇಂದ್ರ ಬಿಂದುವಾಗಿದೆ.

"ಜೀವನ ಚರಿತ್ರೆ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಕುರಿತು ಬರೆಯಲಾದ ಬರವಣಿಗೆಯಾದರೆ, ಆತ್ಮ ಚರಿತ್ರೆ ಒಬ್ಬ ವ್ಯಕ್ತಿ ತನ್ನನ್ನು ಕುರಿತು ತಾನೇ ಬರೆದುದು. ಲಿಟನ್ ಸ್ಟ್ರ್ಯಾಚಿ ಹೇಳುವ ಹಾಗೆ 'ಒಂದು ಒಳ್ಳೆಯ ಜೀವನ ಚರಿತ್ರೆಯನ್ನು ಬರೆಯುವುದು ಬಹುಶಃ ಒಳ್ಳೆಯ ಜೀವನವನ್ನು ನಡೆಸಿದಷ್ಟೇ ಕಷ್ಟ'. ಅಂದಾಗ, ಆತ್ಮ ಸಾಕ್ಷಿಯಾಗಿ ಬರೆಯಬೇಕಾದ ಆತ್ಮಚರಿತ್ರೆ ಇನ್ನೂ ಕಷ್ಟತಮವಾದುದು ಎಂಬುದು ಇದರಿಂದ ಸಿದ್ಧವಾಗುತ್ತದೆ. ಒಬ್ಬ ವ್ಯಕ್ತಿ ತಾನು ಜೀವನದಲ್ಲಿ ಕಂಡ ಸ್ವಾರಸ್ಯ, ಉಂಡ ಅನುಭವ, ಮಾಡಿದ ಕಾರ್ಯ, ತಾಳಿದ ನಿಲುವು ಮೊದಲಾದವನ್ನು ಆತ್ಮ ನಿಷ್ಠವಾಗಿ, ನೂಲಿನ ಮೇಲೆ ನಡೆದಷ್ಟು ಜಾಗ್ರತೆಯಿಂದ ಇಲ್ಲಿ ನಿರೂಪಣೆ ಮಾಡಬೇಕಾಗುತ್ತದೆ."[೧]

ಜೀವನ ಚರಿತ್ರೆ ಹಾಗೂ ಆತ್ಮಕಥನಗಳು ಏಕಕಾಲದಲ್ಲಿ ಮೇಲು ನೋಟಕ್ಕೆ ಬೇರೆ ಎನಿಸಿದರೂ ಅಲ್ಲೂ ಕೂಡ ಭಿನ್ನ ಸ್ವರೂಪದ ನೆಲೆಗಳು ಇರುತ್ತವೆ. ಜೀವನಚರಿತ್ರೆ ಎನ್ನುವುದು ಸಾಮಾಜಿಕವಾದದ್ದು, ಅದು ಚಾರಿತ್ರಿಕವಾದ ದಾಖಲೆಯನ್ನು ಹಲವಾರು ಮೂಲದ ಮೂಲಕ ಕಟ್ಟಿ ಕೊಡುವ ಪ್ರಯತ್ನ ಮಾಡುತ್ತದೆ. ಆದರೆ ಆತ್ಮಕಥನ ತಾನು, ತನ್ನದು, ತನ್ನ ಮನಸ್ಸು, ತನ್ನ ಅಂತರಂಗ, ತನ್ನ ಸಂವೇದನೆ ಮತ್ತು ತಾನು ಪಡೆದ ಒಟ್ಟಾರೆ ಅನುಭವಗಳನ್ನು ಹಾಗೆಯೇ ಚಿತ್ರಿಸುವಂಥದ್ದು.

---

೧. ಆಧುನಿಕ ಕನ್ನಡ ಸಾಹಿತ್ಯ ರೂಪಗಳು(ಸಂ) : ಪುಟ–೧೭೩

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ದೈಹಿಕವಾಗಿ ಹಾಗೂ ಮಾನಸಿಕವಾಗಿ ದಮನಕ್ಕೆ ಒಳಗಾಗಿ ಸ್ವಾತಂತ್ರ್ಯಕ್ಕಾಗಿ ಹಪಹಪಿಸುತ್ತಿರುವ ಜಾಗೃತ ವ್ಯಕ್ತಿತ್ವದ ಮಹಿಳೆಯರ ಬರಹಗಳು ಇಂದು ಮಹಿಳಾ ಆತ್ಮಕಥನಗಳಾಗುತ್ತಿವೆ. 'ಸ್ತ್ರೀ ಅಬಲೆ' ಎಂಬ ಹೇಳಿಕೆಯನ್ನು ಸುಳ್ಳಾಗಿಸಿ, ಸ್ವಾಭಿಮಾನ, ಹೋರಾಟ, ವೈಚಾರಿಕತೆಗಳ ಮೂಲಕವಾಗಿ ತಮ್ಮ ತಮ್ಮ ಅಸ್ಮಿತೆಗಳನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡುತ್ತಿದ್ದಾರೆ.

ಅಕ್ಷರ ಕ್ರಾಂತಿಯ ಪರಿಣಾಮವಾಗಿ ಶಿಕ್ಷಣವನ್ನು ಪಡೆದು ಜಾಗೃತಗೊಂಡ ಮಹಿಳೆಯರು ತಮ್ಮ ಮೇಲಾಗುತ್ತಿರುವ ಅನ್ಯಾಯ, ದೌರ್ಜನ್ಯಗಳನ್ನು ವಿರೋಧಿಸುವುದು ಮತ್ತು ಅವುಗಳನ್ನು ಅಕ್ಷರ ರೂಪಗಳಲ್ಲಿ ದಾಖಲಿಸುವುದೇ ಮಹಿಳಾ ಆತ್ಮಕಥನಗಳ ಮುಖ್ಯ ಲಕ್ಷಣವಾಗಿದೆ. ಮಹಿಳಾ ಲೇಖಕಿಯರು ೧೯ನೆಯ ಶತಮಾನದ ಕೊನೆಯ ಭಾಗದಿಂದಲೂ ಆತ್ಮಚರಿತ್ರೆಗಳನ್ನು ಬರೆಯತೊಡಗಿದ್ದಾರೆ. ಕೆಲವು ಮಹಿಳಾ ಆತ್ಮಕಥನಗಳು ಭಾರತೀಯ ಮಹಿಳೆಯ ಸಾಮಾಜಿಕ ಜೀವನ ಇತಿಹಾಸಕ್ಕೆ ಒಳ್ಳೆಯ ಆಕರ ಗ್ರಂಥಗಳಾಗಿವೆ. ಆತ್ಮಕಥನಗಳನ್ನು ಕಥೆ, ಕಾದಂಬರಿಗಳಷ್ಟು ಸುಲಭವಾಗಿ ಬರೆದು ಬಿಡಲು ಸಾಧ್ಯವಿಲ್ಲ. ಅದನ್ನು ಬರೆಯುವವರಿಗೆ ಧೈರ್ಯ, ಆತ್ಮಸ್ಥೈರ್ಯ ಇರಬೇಕು. ಇವುಗಳ ಜೊತೆಗೆ ಸಮಾಜವನ್ನು ಎದುರಿಸುವ ಎದೆಗಾರಿಕೆ ಇರಬೇಕಾಗುತ್ತದೆ. ಆದರೂ ಇಂದು ಹೆಚ್ಚೆಚ್ಚು ಮಹಿಳಾ ಆತ್ಮಕಥನಗಳು ರಚನೆಯಾಗುತ್ತಲೇ ಇವೆ. ಇದಕ್ಕೆ ಕಾರಣ ಮಹಿಳೆಯರಲ್ಲಿರುವ ಹಠ, ಒಳ ತುಡಿತ ಹಾಗೂ ತಮ್ಮತನವನ್ನು ಸ್ಥಾಪಿಸುವ ಅಭೀಪ್ಸೆ ಮುಖ್ಯವಾಗಿರುತ್ತದೆ.

ಕಥೆ, ಕಾದಂಬರಿಗಳಿಗಿಂತ ನಿಜವಾದ ಅನುಭವಗಳನ್ನು ಹೇಳುವ ಆತ್ಮಕಥನಗಳು ಜನರಿಗೆ ಇಷ್ಟವಾಗುತ್ತಿರುವ ಸಂದರ್ಭದಲ್ಲಿ ಹಲವು ಕ್ಷೇತ್ರಗಳ ಹಲವಾರು ಮಹಿಳೆಯರು ತಾವು ಅನುಭವಿಸಿದ ನೋವು, ಸಂಕಟ, ಸಂಕಷ್ಟ, ಸವಾಲುಗಳನ್ನು ದಾಖಲಿಸುವ ಪ್ರಯತ್ನ ಮಾಡುತ್ತಿದ್ದಾರೆ. ಆ ಹಿನ್ನೆಲೆಯಲ್ಲಿ ಮಹಿಳಾ ಆತ್ಮಕಥನಗಳ ಅಧ್ಯಯನ ಮಾಡುವುದು ಇಂದು ಪ್ರಸ್ತುತವಾಗಿದೆ. ಸೃಜನಶೀಲತೆಯ ಬರಹಗಳು ಅನುಭವ, ಸ್ಫೂರ್ತಿ, ಕಲ್ಪನೆ ಮತ್ತು ಅವಾಸ್ತವಗಳ ಸಾರಾಸಗಟಾದ ಒಂದು ಸೌಂದರ್ಯದ ರಮ್ಯತೆಯನ್ನು ತಂದು ಕೊಡುವ ಹಾಗೂ ಮನಸ್ಸಿನ ಆನಂದಕ್ಕೆ ಪೋಷಕವಾಗುವ ಹಾಗೆ ರಚನೆಯಾಗಿರುತ್ತದೆ. ಆದರೆ ಆತ್ಮಕಥನಗಳು ವಾಸ್ತವತೆಯ ಪ್ರತಿರೂಪ ಮಾತ್ರವಲ್ಲ, ಅದೊಂದು ವ್ಯಕ್ತಿಯ ಸ್ವ ಅನುಭವದ ಸ್ವಂತಿಕೆಯ ಸಾರಲೇಖವಾಗಿದೆ.

## ಅಧ್ಯಯನದ ವಿಷಯ :

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮಹಿಳೆಯರು ಗಮನಾರ್ಹ ಸಂಖ್ಯೆಯಲ್ಲಿ ಬರೆಯಲಾರಂಬಿಸಿದ್ದು ೭೦ರ ದಶಕದಿಂದೀಚೆಗೆ ಅದರ ಮೂಲಕ ಒಂದು ಸ್ಪಷ್ಟವಾದ ಅಸ್ಮಿತೆಯನ್ನು ಕಟ್ಟಿಕೊಳ್ಳುವತ್ತ ಅವರೆಲ್ಲ ಹೆಜ್ಜೆ ಹಾಕಿದರು. ನಮ್ಮ ಸಾಹಿತ್ಯ ಪರಂಪರೆಗೆ ೧೬೦೦ ವರ್ಷಗಳ ಇತಿಹಾಸ ಇದೆಯಾದರೂ ಮಹಿಳಾ ಸಮಾಜದ ಅನುಭವಗಳ ಅಭಿವ್ಯಕ್ತಿ ಬಹಳ ಕಡಿಮೆಯೆಂದೇ ಹೇಳಬೇಕು. ನಮಗೆ ಸ್ವತಂತ್ರ ಬಂದು ೬೫ ವರ್ಷಗಳು ಕಳೆದರೂ ಸ್ತ್ರೀಯರಿಗೆ ಪೂರ್ಣ ಪ್ರಮಾಣದ ಸ್ವಾತಂತ್ರ್ಯ, ಶಿಕ್ಷಣ, ಉದ್ಯೋಗ, ಹಕ್ಕು ಲಭಿಸಿದೆ ಎಂದು ಮುಕ್ತವಾಗಿ, ಧೈರ್ಯವಾಗಿ ಹೇಳಲು ಸಾಧ್ಯವಿಲ್ಲ. ಪುರುಷರ ಸಮಸ್ಯೆಗಳಿಗೆ ಹೋಲಿಸಿದರೆ ಮಹಿಳೆಯರ ಸಮಸ್ಯೆಗಳ ಸ್ವರೂಪ ಹಾಗೂ ಅಭಿವ್ಯಕ್ತಿ ಕ್ರಮ ಭಿನ್ನದಾಗಿರುತ್ತದೆ. ಕೌಟುಂಬಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಬಿಕ್ಕಟ್ಟಿನ ವಾತಾವರಣದಲ್ಲಿ ಬದುಕುತ್ತಿರುವ ಮಹಿಳೆ, ಮಹಿಳಾ ಸಮಾಜದ ಸ್ಥಿತಿ–ಗತಿಯನ್ನು ದಾಖಲಿಸುವಲ್ಲಿ ಹೆಣ್ಣಿನ ಪಾತ್ರ ಹಿರಿದಾಗಿದೆ.

ಕನ್ನಡ ಸಾಹಿತ್ಯ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ, ಕವಿತೆಗಳಿಗೆ ಹೋಲಿಸಿದರೆ ಜೀವನ ಚರಿತ್ರೆಗಳು ಬಂದಿರುವುದು ಕಡಿಮೆ, ಆತ್ಮಕಥನಗಳು ಇನ್ನೂ ಕಡಿಮೆ ಎಂದೇ ಹೇಳಬಹುದು. ಆದರೆ ಕನ್ನಡ ಸಾಹಿತ್ಯದಲ್ಲಿ ಆತ್ಮಕಥನಗಳು ಜನ ಮೆಚ್ಚುಗೆ ಪಡೆಯುತ್ತಿದ್ದಂತೆ ಹಾಗೂ ಲೇಖಕಿಯರಿಗೆ ಸ್ವಾತಂತ್ರ್ಯ ಮತ್ತು ಆತ್ಮವಿಶ್ವಾಸ ಹೆಚ್ಚಾದಂತೆ ಇತ್ತೀಚೆಗೆ ಮಹಿಳಾ ಲೇಖಕಿಯರು ಆತ್ಮಕಥನವನ್ನು ರಚಿಸಲಾರಂಭಿಸಿದ್ದನ್ನು ನೋಡಬಹುದಾಗಿದೆ.

ಈ ಸಂಶೋಧನಾ ಪ್ರಬಂಧದ ಅಧ್ಯಯನಕ್ಕೆ ೨೧ನೇ ಶತಮಾನದ ೨ನೇ ದಶಕದಲ್ಲಿ ಬಂದಿರುವ ಎರಡು ಮಹಿಳಾ ಆತ್ಮಕಥನಗಳಾದ ಪ್ರತಿಭಾನಂದಕುಮಾರ್ ಅವರ 'ಅನುದಿನದ ಅಂತರಗಂಗೆ' ಹಾಗೂ ಭಾರ್ಗವಿನಾರಾಯಣ್ ಅವರ 'ನಾನು ಭಾರ್ಗವಿ' ಈ ಕೃತಿಗಳನ್ನು ಪರಿಶೀಲಿಸುವುದು ಈ ಅಧ್ಯಯನದ ಆಶಯವಾಗಿದೆ.

## ಅಧ್ಯಯನದ ಉದ್ದೇಶ :

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ೨೧ನೇ ಶತಮಾನದ ಕಾಲಘಟ್ಟ ಬಹಳ ಮಹತ್ವಪೂರ್ಣವಾಗಿದೆ. ಏಕೆಂದರೆ ಆಮೂಲಾಗ್ರವಾದ ಸಾಮಾಜಿಕ, ಆರ್ಥಿಕ, ರಾಜಕೀಯ, ಪಲ್ಲಟಗಳು, 'ಸ್ವಾತಂತ್ರ್ಯ, ಸಮಾನತೆ, ವ್ಯಕ್ತಿಯ ಹಕ್ಕಿನ ಅರಿವು, ಅವುಗಳ ಬಗೆಗಿನ ಹೋರಾಟ

ಹಾಗೂ ಚಳುವಳಿಗಳ ಕಾಲಘಟ್ಟ ಇದಾಗಿದೆ. ಇಂಥ ಸಮಯದಲ್ಲಿ ಸಂವಿಧಾನಾತ್ಮಕವಾಗಿ ಹಕ್ಕುಗಳು ವ್ಯಾಖ್ಯಾನಕ್ಕೆ ಒಳಪಟ್ಟಿದ್ದರೂ ಸಾಮಾಜಿಕವಾಗಿ, ಹೆಣ್ಣು ವಹಿಸುವ ಪಾತ್ರದಲ್ಲಿ ಮಹತ್ತರವಾದ ಯಾವ ಬದಲಾವಣೆಯೂ ಸಂಭವಿಸಿರದ ಕಾರಣವಿರುವುದರಿಂದಲೇ ಇದೊಂದು ಸಂಘರ್ಷ ಹಾಗೂ ವೈರುದ್ಯಗಳ ಕಾಲಘಟ್ಟ.

ಇಂಥ ಸಾಹಿತ್ಯದ ಕಾಲಘಟ್ಟವಾದ ನವ್ಯ ಕಾಲದಲ್ಲಿ ಹುಟ್ಟಿ, ಬೆಳೆದು ಸಾಂಸ್ಕೃತಿಕ ವಲಯದಲ್ಲಿ ಗಮನಾರ್ಹವಾದ ಸಾಧನೆಯನ್ನು ಸಾಧಿಸಿದ ಮಹಿಳಾ ರತ್ನಗಳಲ್ಲಿ ಪ್ರತಿಭಾ ನಂದಕುಮಾರ್ ಹಾಗೂ ಭಾರ್ಗವಿ ನಾರಾಯಣ್ ಪ್ರಮುಖರು. ಸ್ತ್ರೀ ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾತಂತ್ರ್ಯ, ಸಮಾನತೆ, ಸ್ವಾವಲಂಬನೆ, ಸ್ವತಂತ್ರ ಚಿಂತನಾ ಮನೋಭಾವ, ಜೀವನದ ಆಯ್ಕೆಯಲ್ಲಿ ಪಡೆದ ಸ್ವಾತಂತ್ರ್ಯ, ಸಮಾಜದ ಏರಿಳಿತಗಳಿಗೆ ಸ್ಪಂದಿಸುವ ಮನೋ ಚೈತನ್ಯದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಮನೋವಾಂಛೆಯ ವ್ಯಕ್ತಿತ್ವವನ್ನು ಹಾಗೂ ವೈಯಕ್ತಿಕ ಅಸ್ಮಿತೆಯನ್ನು ಹೇಗೆ ಕಂಡುಕೊಂಡರು ಎನ್ನುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಬಹುದು.

ಈ ಕಥನಗಳ ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಆಕೃತಿಗಳನ್ನು ವಿಶ್ಲೇಷಿಸುವುದರ ಜೊತೆಗೆ ಈ ಎರಡು ಆತ್ಮಕಥನಗಳ ಮೂಲಕ ಒಂದು ನಿರ್ದಿಷ್ಟ (ಆಧುನಿಕ) ಚಾರಿತ್ರಿಕ ಕಾಲಘಟ್ಟದಲ್ಲಿ ಈ ರೀತಿಯ ಹೆಣ್ಣು ಮಕ್ಕಳ ಬದುಕಿನ ವಿನ್ಯಾಸವನ್ನು ಅರ್ಥ ಮಾಡಿಕೊಳ್ಳುವುದೂ ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ :

೨೦೧೨ರಲ್ಲಿ ಪ್ರಕಟವಾಗಿರುವ 'ಅನುದಿನದ ಅಂತರಗಂಗೆ' ಹಾಗೂ 'ನಾನು ಭಾರ್ಗವಿ' ಎರಡು ಆತ್ಮಕಥನಗಳನ್ನು ನನ್ನ ಎಂ.ಫಿಲ್ ಪ್ರಬಂಧದ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಶೈಕ್ಷಣಿಕವಾಗಿ ನೋಡಿದಾಗಲೂ ಈ ಎರಡೂ ಆತ್ಮಕಥನಗಳ ಬಗ್ಗೆ ಇದುವರೆಗೂ ಸಂಶೋಧನೆ ನಡೆದಿಲ್ಲ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇದೂವರೆಗೆ ಬಂದಿರುವ ಮಹಿಳಾ ಆತ್ಮಕಥನಗಳನ್ನು ಅವುಗಳ ಬರವಣಿಗೆಯ ಸ್ವರೂಪದ ಹಿನ್ನೆಲೆಯಲ್ಲಿ ಎರಡು ಪ್ರಕಾರಗಳಾಗಿ ವಿಭಾಗಿಸಬಹುದು;–

(೧) ಗ್ರಂಥರೂಪದಲ್ಲಿ ಬಂದ ಆತ್ಮಕಥನಗಳು

(೨) ಲೇಖನ ರೂಪದಲ್ಲಿ ರಚಿತಗೊಂಡ ಆತ್ಮಕಥನಗಳು

ಪ್ರಸ್ತುತ ಸಂದರ್ಭದಲ್ಲಿ ಗ್ರಂಥರೂಪದಲ್ಲಿ ಬಂದಿರುವ ಪ್ರತಿಭಾನಂದಕುಮಾರ್ ಅವರ 'ಅನುದಿನದ ಅಂತರಗಂಗೆ' ಹಾಗೂ ಭಾರ್ಗವಿನಾರಾಯಣ್ ಅವರ 'ನಾನು, ಭಾರ್ಗವಿ' ಆತ್ಮಕಥನಗಳನ್ನು ಸಂಶೋಧನೆಗೆ ಅಳವಡಿಸಿಕೊಂಡಿದ್ದೇನೆ. ಕಲಾ ಜಗತ್ತಿನ ವೈವಿಧ್ಯತೆಯ ವಿವಿಧ ನೆಲೆಯಲ್ಲಿ ತಮ್ಮ ಅಸ್ಮಿತೆಯನ್ನು ಗುರುತಿಸಿಕೊಂಡಿರುವ ಇಂಥ ಮಹಿಳೆಯರು ಓದುಗರಿಗೆ ನೀಡಿರುವ ಆತ್ಮಕಥನವನ್ನು ಶೋಧಿಸುವ ಕಾರ್ಯ ನನ್ನದಾಗಿದೆ.

ಪ್ರತಿಭಾ ನಂದಕುಮಾರ್ ಕವಿಯತ್ರಿಯಾಗಿ, ವಿಚಾರವಾದಿಯಾಗಿ, ಪ್ರಾಧ್ಯಾಪಕಿಯಾಗಿ, ಪತ್ರಿಕೋದ್ಯಮಿಯಾಗಿ, ಭಾಷಾಂತರಕಾರರಾಗಿ, ಸಹಾಯಕ ನಿರ್ದೇಶಕಿಯಾಗಿ ಕೆಲಸ ಮಾಡಿದ್ದಾರೆ, ಇಂದಿಗೂ ಮಾಡುತ್ತಿದ್ದಾರೆ. ಮತ್ತೊಬ್ಬ ಲೇಖಕಿಯಾದ ಭಾರ್ಗವಿ ನಾರಾಯಣ್ ರಂಗಭೂಮಿಯ ಜಗತ್ತಿನಲ್ಲಿ ಉತ್ತಮ ಕಲಾವಿದೆಯಾಗಿ, ಕಿರುತೆರೆ, ಹಿರಿತೆರೆಯಲ್ಲಿ ಉತ್ತಮ ನಟಿಯಾಗಿ ಇಂದಿಗೂ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ.

'ನನ್ನ ಕವಿತೆಗಳೇ ನನ್ನ ಆತ್ಮಕಥನ' ಎಂದು ಹೇಳಿರುವ ಪ್ರತಿಭಾ ನಂದಕುಮಾರ್‌ರವರ 'ಅನುದಿನದ ಅಂತರಗಂಗೆ', 'ನನ್ನನ್ನು ನಾನಾಗಿ ಉಳಿಯಲು ಅನುವು ಮಾಡಿಕೊಟ್ಟವರು ಅಮ್ಮ ಹಾಗೂ ನಾಣಿ' ಎಂದು ಹೇಳಿರುವ ಭಾರ್ಗವಿ ನಾರಾಯಣ್ ರವರ 'ನಾನು ಭಾರ್ಗವಿ' ನನ್ನ ಅಧ್ಯಯನದ ವ್ಯಾಪ್ತಿಯಾಗಿದೆ. ಈ ಇಬ್ಬರು ಮಹಿಳೆಯರೂ ಸಮಾಜದ ಸೃಜನಶೀಲ ಬರಹಗಾರರು.

## ಅಧ್ಯಯನದ ಮಹತ್ವ :

ಕನ್ನಡದಲ್ಲಿ ೧೯ನೇ ಶತಮಾನದ ಮಧ್ಯಭಾಗದವರೆಗೂ ಆತ್ಮಕಥನಗಳಿಗೆ ಒಂದು ಅಸ್ತಿತ್ವ ಇರಲಿಲ್ಲ. ಅದು ಜೀವನ ಚರಿತ್ರೆಯೊಂದಿಗೆ ಕೂಡಿ ಕೊಂಡಿತ್ತು. ಆತ್ಮಕಥನ ಇತ್ತೀಚೆಗೆ ಸ್ವತಂತ್ರವಾಗಿ ಪ್ರತ್ಯೇಕ ಅಸ್ತಿತ್ವವನ್ನು ಪಡೆದುಕೊಂಡು ಬೆಳೆಯುತ್ತಿದೆ.

ಕನ್ನಡದ ಮೊಟ್ಟ ಮೊದಲ ಸ್ವತಂತ್ರ ಆತ್ಮಕಥನ ೧೯೩೦ರಲ್ಲಿ ಪ್ರಕಟವಾದ ಹರ್ಡೇಕರ್ ಮಂಜಪ್ಪನವರ 'ನನ್ನ ಮುವತ್ತು ವರುಷಗಳ ಕಾಣಿಕೆ'ಯಾದರೂ ನಿಟ್ಟೂರು ಶ್ರೀನಿವಾಸರಾವ್ ದಂಪತಿಗಳಿಂದ ಭಾಷಾಂತರಗೊಂಡ ಗಾಂಧೀಜಿಯವರ 'ಸತ್ಯ ಶೋಧನೆ'ಯೇ ಒಂದು ಮುಖ್ಯ ಮೈಲಿಗಲ್ಲಾಗಿದೆ. ೧೯೯೪ರಲ್ಲಿ ಬಂದ ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕನ್ನಡದ ಮೊದಲ ದಲಿತ ಆತ್ಮಕಥನವಾಗಿದೆ. ೧೯೭೭ರಲ್ಲಿ ಪ್ರಕಟವಾದ ವಾಸಂತಿ

ಪಡುಕೋಣೆಯವರ 'ಜೀವನದ ಹೋರಾಟ'ವೇ ಕನ್ನಡದ ಮೊಟ್ಟ ಮೊದಲ ಮಹಿಳಾ ಆತ್ಮಕಥನವಾಗಿದೆ.

ವಾಸ್ತವವಾಗಿ ನೋಡಿದರೆ ಮಹಿಳೆಯರ ಜೀವನ, ಅವರ ಅನುಭವ ಪುರುಷರಿಗಿಂತ ಭಿನ್ನ ಹಾಗೂ ವಿಶಿಷ್ಟವಾದುದು. ಮಹಿಳೆಯರಿಗೆ ಸಾಮಾನ್ಯವಾಗಿ ಎದುರಾಗುವುದು ಪ್ರತಿಕೂಲ ಪರಿಸ್ಥಿತಿಗಳೇ. ಅಂತಹ ಪರಿಸ್ಥಿತಿಗಳಿಂದ ಕಲಿಯುವ ಪಾಠ ಬೇರೆಲ್ಲೂ ಕಲಿಯಲು ಸಾಧ್ಯವಿಲ್ಲ. ಆ ಪರಿಸ್ಥಿತಿಯಲ್ಲೇ ಆಕೆ ತನ್ನ ಮೇಲೆ ಹೇರಲಾಗಿರುವ ಸಂಪ್ರದಾಯದ ಕಟ್ಟುಪಾಡುಗಳೊಂದಿಗೆ ಹೋರಾಡುತ್ತಲೇ ಬಂದಿದ್ದಾಳೆ. ಈ ಹೋರಾಟದಲ್ಲಿ ಯಾರೂ ಕಲಿಸಲಾಗದ ಹೊಸ ಪಾಠವನ್ನು ಕಲಿತು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು, ಆತ್ಮವಿಶ್ವಾಸವನ್ನು ಬೆಳೆಸಿಕೊಂಡಿದ್ದಾಳೆ.

ಮಹಿಳೆಯರು ಆತ್ಮಕಥೆ ಬರೆಯುವುದೇ ಒಂದು ದೊಡ್ಡ ಸವಾಲು. ತೀರಾ ಖಾಸಗಿಯಾದಂತಹ ವಿಷಯಗಳನ್ನು ಬಹಿರಂಗಗೊಳಿಸುವುದು ಸುಲಭದ ಮಾತಲ್ಲ. ತಮ್ಮ ಬದುಕಿನ ಕೆಲವು ಪುಟಗಳನ್ನು ಪುರುಷ ಬಹಿರಂಗಗೊಳಿಸಿ ಬರೆಯುವಂತೆ ಸ್ತ್ರೀ ತಾನು ಅನುಭವಿಸಿದ ಘಟನೆಗಳನ್ನು ಮೂಡಿಸುವುದಕ್ಕೆ ಒಂದು ವಿಭಿನ್ನ ರೀತಿಯ ಮಾನಸಿಕ ಸ್ಥಿತಿಯ ಅಗತ್ಯವಿರುತ್ತದೆ.

ಆತ್ಮಕಥನಗಳ ಮೂಲಕ ಹೆಣ್ಣಿನ ಹೊಸ ಆಲೋಚನಾ ಕ್ರಮಗಳನ್ನು ನೋಡಬಹುದಾಗಿದೆ. ಇಲ್ಲಿನ ವಸ್ತು ಬರೆಯುವವರ ಬದುಕೇ ಆಗಿರುವುದರಿಂದ ನಮ್ಮ ಈ ಪುರುಷ ಪ್ರಧಾನ ವ್ಯವಸ್ಥೆಯನ್ನು ವಿಮರ್ಶಿಸುವ ಸಾಧನವೂ ಆಗಿದೆ. ತನ್ನ ಜೀವನದ ಘಟನೆಗಳನ್ನು ಹೇಳಿಕೊಳ್ಳುವ ಧೈರ್ಯ ಮಾಡಿರುವ ಹಿನ್ನೆಲೆಯಲ್ಲಿ ಮಹಿಳಾ ಆತ್ಮಕಥನಗಳು ಕುತೂಹಲವನ್ನು ಕೆರಳಿಸುತ್ತವೆ.

ಮಹಿಳೆ ತನ್ನ ಜೀವನದಲ್ಲಿ ಕಂಡುಂಡ ಅನುಭವಗಳನ್ನು ನಿಸ್ಸಂಕೋಚವಾಗಿ, ನಿರ್ಭಯದಿಂದ ಹೇಳಿಕೊಳ್ಳುವ ಧೈರ್ಯ ಮಾಡಬೇಕು. ನಿರ್ಭೀಡೆಯಿಂದ ಎಲ್ಲವನ್ನು ಹೇಳಿಕೊಳ್ಳುವ ದಾಷ್ಟ್ರ್ಯ, ಗಟ್ಟಿತನ ಮಹಿಳೆಯರಿಗೆ ಬಂದಾಗ ಹೆಚ್ಚಿನ ಪ್ರಮಾಣದಲ್ಲಿ ಆತ್ಮಕಥನಗಳು ಹೊರ ಬರುತ್ತವೆ. ಪ್ರತಿಭಾ ನಂದಕುಮಾರ್ ಹಾಗೂ ಭಾರ್ಗವಿ ನಾರಾಯಣ್ ತಮ್ಮ ಆತ್ಮಕಥನಗಳಲ್ಲಿ ಇಂತಹ ಧೈರ್ಯ ಹಾಗೂ ಗಟ್ಟಿತನವನ್ನು ತೋರಿ ನಿರ್ಭಯದಿಂದ ಎಲ್ಲವನ್ನು ಹೇಳಿಕೊಂಡಿದ್ದಾರೆ.

ಪ್ರತಿಯೊಂದು ಸಾಹಿತ್ಯ ಪ್ರಕಾರಕ್ಕೂ ಒಂದು ಸಾಂಸ್ಕೃತಿಕ ರಾಜಕಾರಣವಿರುತ್ತದೆ. ಆತ್ಮಕಥನಗಳು ಈ ಹಿನ್ನೆಲೆಯಿಂದ ಬೇರೆಲ್ಲಾ ಪ್ರಕಾರಗಳಿಂಗಿಂತ ಒಂದು ವಿಭಿನ್ನ ರಾಜಕಾರಣವನ್ನು ಮುಂದಿಡುತ್ತದೆ.

- "ಮೊದಲನೆಯದಾಗಿ ಅದು ಸಮಾಜದೊಂದಿಗೆ ಧೈರ್ಯವಾಗಿ ತೀವ್ರವಾದ ವೈಯಕ್ತಿಕತೆಯಿಂದ ಮುಖಾಮುಖಿಯಾಗುವ ಮನಸ್ಥಿತಿಯನ್ನು ಸೂಚಿಸುತ್ತದೆ.
- ಎರಡನೆಯದಾಗಿ ವ್ಯಕ್ತಿಯ ಬದುಕಿನ ಸಾರ್ವಜನಿಕ ಮತ್ತು ಖಾಸಗಿ ವಲಯಗಳು ಸ್ಪಷ್ಟವಾಗಿ ಅನಾವರಣಗೊಳ್ಳುತ್ತವೆ.
- ಮೂರನೆಯದಾಗಿ ಆತ್ಮಕಥನ ಎನ್ನುವುದೇ ತನ್ನ ತನವನ್ನು ದೃಢವಾಗಿ ಸ್ಥಾಪಿಸುವ ಒಂದು ಕ್ರಿಯೆಯಾಗಿದೆ."[೨]

ಈ ಲಕ್ಷಣಗಳಿರುವ ಆತ್ಮಕಥೆಗಳನ್ನು ಓದುವ ಮೂಲಕ ವ್ಯಕ್ತವಾಗುವ ಕಥನದ ಕಲ್ಪನೆ ಯಾವ ರೀತಿಯದು ಎನ್ನುವುದನ್ನು ಈ ಅಧ್ಯಯನವು ಪರಿಶೀಲಿಸುತ್ತದೆ. ಕನ್ನಡ ಸಾಂಸ್ಕೃತಿಕ ಪರಂಪರೆಗೆ ಈ ಎರಡು ಆತ್ಮಕಥನಗಳು ಯಾವ ರೀತಿಯ ಕೊಡುಗೆ ನೀಡಿದೆ ಎನ್ನುವುದನ್ನು ಈ ಅಧ್ಯಯನ ಪರಿಶೀಲಿಸುತ್ತದೆ.

## ಅಧ್ಯಯನದ ವಿಧಾನ :

ಕನ್ನಡದಲ್ಲಿ ಈಗಾಗಲೇ ಅಂತರ್‌ಶಿಸ್ತೀಯ ವಿಮರ್ಶೆ, ನವ್ಯ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ ಮಾದರಿಗಳ ಮೂಲಕ ಅಧ್ಯಯನಗಳು ನಡೆದಿವೆ. "ಸಾಹಿತ್ಯ ಅಧ್ಯಯನ ಮತ್ತು ಸಾಹಿತ್ಯ ವಿಮರ್ಶೆಗಳು, ಚರಿತ್ರೆ ತತ್ವಶಾಸ್ತ್ರ, ಮನಃಶಾಸ್ತ್ರ, ಸಮಾಜಶಾಸ್ತ್ರ ಮತ್ತು ಭಾಷಾಶಾಸ್ತ್ರಗಳೊಡನೆ ಒಡನಾಟವನ್ನು ಹೆಚ್ಚಿಸಿಕೊಳ್ಳಬೇಕೆಂಬ ಅಪೇಕ್ಷೆ ಅಂತರ್‌ಶಿಸ್ತೀಯ ವಿಮರ್ಶಾಮಾದರಿಯ ಕೆಲಸವಾದರೆ 'ಕೃತಿಯ ವಿವರಣೆ ಅಥವಾ ನಿಕಟ ಓದುವಿಕೆಯ ಮುಖಾಂತರ ಕೃತಿಯೊಂದರ ವಿವಿಧ ಘಟಕಗಳ ನಡುವೆ ಇರುವ ಸಂಕೀರ್ಣ ಸಂಬಂಧ ಮತ್ತು ಅರ್ಥ ಸಂದಿಗ್ಧತೆಗಳನ್ನು ನವ್ಯ ವಿಮರ್ಶಾ ಮಾದರಿ ಪ್ರಯತ್ನಿಸುತ್ತದೆ', 'ಕೃತಿಯು ರಚನೆಗೊಂಡ ಕಾಲ ಮತ್ತು ಸ್ಥಳದ ವಾಸ್ತವಿಕ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳಿಗೂ ಕೃತಿಗೂ ಇರುವ ಸಂಬಂಧವನ್ನು ಮಾರ್ಕ್ಸ್‌ವಾದಿ ವಿಮರ್ಶಾ ಮಾದರಿ ಪರಿಶೀಲಿಸುತ್ತದೆ'.

---

೨. ಇ.ಪಿ.ಡಬ್ಲೂ ಲೇಖನ – ಎಕನಾಮಿಕ್ ಮತ್ತು ಪೊಲಿಟಿಕಲ್ ವೀಕ್ಲಿ; ಡಿಸಂಬರ್ ೧೯, ೨೦೦೯ ವ್ಯಾಲ್ಯೂಂ ನಂ.೫೧

ಈ ಪ್ರಸ್ತುತ ಅಧ್ಯಯನವನ್ನು 'ರಾಚನಿಕೋತ್ತರ ಅಧ್ಯಯನದ ವಿಧಾನದ' ಮೂಲಕ ವಿಧಾನದ ಮುಖ್ಯ ಲಕ್ಷಣವೆಂದರೆ ಒಂದು ಪಠ್ಯದ ಮೂಲಕ ಒಂದು ಕಾಲಘಟ್ಟದ ಚರಿತ್ರೆ, ರಾಜಕೀಯ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆಯನ್ನು ನಾವು ಅರ್ಥಮಾಡಿಕೊಳ್ಳುತ್ತೇವೆ.

'ಪಠ್ಯವೊಂದನ್ನು ಅತಿ ನಿಕಟ ಓದುವಿಕೆಗೆ ಒಳಪಡಿಸಿ ಅದರ ಒಂದೊಂದು ಅಂಗಗಳ ಸಂಬಂಧವನ್ನು ಬಿಡಿಸಿನೋಡಿ, ಪಠ್ಯವು ಖಚಿತ ಅರ್ಥದ ಭ್ರಮೆಯನ್ನು ಮೂಡಿಸುವ ಸಂಯೋಜನೆ ಮಾತ್ರ, ಸಂಯೋಜನೆಯನ್ನು ಮೀರಿದ, ವಿರೋಧಿಸುವ, ಅಂಶಗಳು ಪಠ್ಯದೊಳಗೇ ಅಡಗಿರುತ್ತವೆ. ಎಂಬುದನ್ನು ಅರಿಯುವ ಮತ್ತು ಮಂಡಿಸುವ ಕ್ರಮವೇ 'ನಿರಚನವಾದ' ಅಥವಾ 'ರಾಚನಿಕೋತ್ತರವಾದ' ಈ ಕಲ್ಪನೆಯನ್ನು 'ಡಿಕನ್‌ಸ್ಟ್ರಕ್ಷನ್' ಎಂದು ಹೆಸರಿಸಿ ಅದರ ತತ್ವವನ್ನು ವಿವರಿಸಿದವನು ಫ್ರಾನ್ಸ್‌ನ ಚಿಂತಕ ಜಾಕ್ವೆಸ್ ಡೆರಿಡಾ'[೩]

ಈ ವಿಧಾನದಲ್ಲಿ ಕೇಂದ್ರ ಮತ್ತು ಪರಿಧಿ ಎಂಬ ಕಲ್ಪನೆಯನ್ನು ಸೃಷ್ಟಿಸಿಕೊಳ್ಳದೇ ಎಲ್ಲದಕ್ಕೂ ಸಮಾನವಾದಂತಹ ಮಹತ್ವವನ್ನು ನೀಡುವುದಾಗಿದೆ. ಆದ್ದರಿಂದ ಈ ಪಠ್ಯಗಳಲ್ಲಿ ಬರುವ ಎಲ್ಲಾ ವಿವರಗಳಿಗೂ ಸಮಾನವಾದ ಮಹತ್ವವನ್ನು ನೀಡಲಾಗುತ್ತದೆ. ಎರಡೂ ಪಠ್ಯಗಳು ಮಹಿಳೆಯರಿಂದ ರಚಿತವಾಗಿರುವುದರಿಂದ ಇವುಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಸ್ತ್ರೀವಾದದ ನೆರವನ್ನು ತೆಗೆದುಕೊಳ್ಳಲಾಗಿದೆ.

---

೩. ವಿಮರ್ಶೆಯ ಪರಿಭಾಷೆ – ಓ.ಎಲ್. ನಾಗಭೂಷಣಸ್ವಾಮಿ, ಪು..ಸಂ. ೩೦೧, ೩೨೬,೩೬೯

## ಈ ಅಧ್ಯಾಯದ ಗ್ರಹೀತಗಳು :

೧. ಮಹಿಳಾ ಆತ್ಮಕಥನಗಳು ರಚನೆಯಾಗುತ್ತಿರುವ ಹಿಂದಿರುವ ಪ್ರಚೋದನೆಗಳಾವುವು ಎಂಬುದನ್ನು ಈ ಅಧ್ಯಾಯದಲ್ಲಿ ಕಾಣಬಹುದಾಗಿದೆ.

೨. ಈ ಪ್ರಬಂಧದ ವಿಷಯಗಳಾದ 'ಅನುದಿನದ ಅಂತರಗಂಗೆ' ಹಾಗೂ 'ನಾನು, ಭಾರ್ಗವಿ' ಆತ್ಮಕಥನಗಳ ಆಯ್ಕೆಯ ಹಿಂದಿರುವ ಉದ್ದೇಶವೇನೆಂದು ಇಲ್ಲಿ ತಿಳಿಸಲಾಗಿದೆ.

೩. ಅಧ್ಯಯನದ ವ್ಯಾಪ್ತಿ ಹಾಗೂ ಮಹತ್ವವನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

೪. ನನ್ನ ಈ ಸಂಶೋಧನೆಯನ್ನು 'ರಾಚನಿಕೋತ್ತರ ಅಧ್ಯಯನ'ದ ವಿಧಾನದ ಮೂಲಕ ಕೈಗೆತ್ತಿಕೊಳ್ಳಲಾಗಿದೆ ಎಂಬುದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

# ಅಧ್ಯಾಯ – ೨
# ಪ್ರತಿಭಾನಂದಕುಮಾರ್‌ರವರ ಆತ್ಮಕಥನ : ಆಧುನಿಕ ಪರಿಸರದಲ್ಲಿ ಅಸ್ಮಿತೆಯ ಹುಡುಕಾಟ

## ಅ. ಲೇಖಕಿಯ ಕಿರುಪರಿಚಯ :

ಕನ್ನಡ ಸಾಹಿತ್ಯ ಲೋಕದಲ್ಲಿ ಕಾವ್ಯಧರ್ಮವನ್ನೇ ತನ್ನ ಮನೋಧರ್ಮವನ್ನಾಗಿಸಿ ಕೊಂಡಿರುವ ಕವಿಯತ್ರಿ ಪ್ರತಿಭಾ. ರಾಮಚಂದ್ರರಾವ್ ಹಾಗೂ ಯಮುನಾಬಾಯಿ ಅವರ ಮಗಳಾಗಿ ೧೯೫೫ರಲ್ಲಿ ಹುಟ್ಟಿದ ಪ್ರತಿಭಾ ಮದ್ರಾಸ್ ವಿಶ್ವವಿದ್ಯಾಲಯದಿಂದ ಎಂ.ಎ ಹಾಗೂ ಎಂ.ಫಿಲ್ ಪದವಿಯನ್ನು ಪಡೆದಿದ್ದಾರೆ. ವಸ್ತು, ಧೋರಣೆ, ಆಶಯಗಳ ದೃಷ್ಟಿಯಿಂದ ಪ್ರತಿಭಾ ನಂದಕುಮಾರ್‌ಅವರು ಉಳಿದ ಲೇಖಕಿಯರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ.

ಕವಿಯತ್ರಿ, ಸಣ್ಣಕಥೆಗಳ ಲೇಖಕಿ ಮತ್ತು ನಾಟಕಗಳ ರಚನಕಾರ್ತಿಯಾದ ಪ್ರತಿಭಾ ಎನ್.ಜಿ.ಎಫ್‌ನಲ್ಲಿ ಭಾಷಾಂತರಕಾರರಾಗಿ ನಂತರ ಇಂಡಿಯನ್ ಎಕ್ಸ್‌ಪ್ರೆಸ್, ಡೆಕ್ಕನ್ ಹೆರಾಲ್ಡ್ ಮತ್ತು ಅಗ್ನಿ ಪತ್ರಿಕೆಗಳಲ್ಲಿ ಪತ್ರಕರ್ತೆಯಾಗಿ ನಿರ್ದೇಶಕಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ.

'ನಾವು ಹುಡುಗಿಯರೇ ಹೀಗೆ' (೧೯೮೩), 'ಈತನಕ'(೧೯೮೮), 'ರಸ್ತೆಯಂಚಿನ ಗಾಡಿ'(೧೯೯೧), 'ಕವಡೆಯಾಟ'(೧೯೯೮), 'ಆಹಾಮರಪಾಕಾರಂ!'(೨೦೦೦), 'ಅವರು ಪುರಾವೆಗಳನ್ನು ಕೇಳುತ್ತಾರೆ', 'ಮುನ್ನುಡಿ ಬೆನ್ನುಡಿಗಳ ನಡುವೆ', 'ಕಾಫಿಹೌಸ್', 'ಮುದುಕಿಯರಿಗಿದು ಕಾಲವಲ್ಲ', ಹೀಗೆ ಒಟ್ಟು ೯ ಕವನ ಸಂಕಲಗಳನ್ನೂ, 'ನಿಮ್ಮಿಕಾಲಂ' ಎಂಬ ಅಂಕಣ ಬರಹವನ್ನೂ; 'ಮಿರ್ಚ್ ಮಸಾಲ' ಎಂಬ ಲೇಖನ ಸಂಗ್ರಹಗಳನ್ನೂ, ಹಲವು ಮಹಿಳಾ ನಟಿಯರ ಆತ್ಮಕಥೆಗಳನ್ನೂ ಬರೆದಿರುವ ಪ್ರತಿಭಾ ೨೦೧೨ರಲ್ಲಿ 'ಅನುದಿನದ ಅಂತರಗಂಗೆ' ಎಂಬ ತಮ್ಮ ಆತ್ಮಕಥನವನ್ನು ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ.

೧೯೯೭ರ ಗುಟೆನ್‌ಬರ್ಗ್ ಇಂಟರ್‌ನ್ಯಾಷನಲ್ ಬುಕ್ ಫೇರ್‌ಗೆ, ೧೯೯೮ರಲ್ಲಿ ಹೆಲ್ಸಿಂಕಿನಲ್ಲಿ ನಡೆದ ಏಷ್ಯಾ ಬರಹಗಾರರ ಸಮ್ಮೇಳನಕ್ಕೆ ಹಾಗೂ ೨೦೦೨ರಲ್ಲಿ ಖಟ್ಮಂಡುವಿನಲ್ಲಿ ನಡೆದ ಸಾರ್ಕ್ ಬರಹಗಾರರ ಸಮ್ಮೇಳನಕ್ಕೆ ವಿಶೇಷ ಆಹ್ವಾನಿತರಾಗಿ ಭಾಗವಹಿಸಿದ್ದ

ಪ್ರತಿಭಾರವರಿಗೆ ೨೦೦೦ರ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೦೩ರ ಮಹಾದೇವಿ ವರ್ಮ ಕಾವ್ಯ ಸಮ್ಮಾನ ಪ್ರಶಸ್ತಿ, ಮುದ್ದಣ್ಣ ಕಾವ್ಯ ಪ್ರಶಸ್ತಿ, ಡಾ.ಶಿವರಾಮ ಕಾರಂತ ಪ್ರಶಸ್ತಿ, ಪು.ತಿ.ನ. ಕಾವ್ಯ ಪ್ರಶಸ್ತಿ, ಗೌರೀಶ ಕಾಯ್ಕಿಣಿ ಕಾವ್ಯ ಪ್ರಶಸ್ತಿ, ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ, ಹೂಗಾರ ಸ್ಮಾರಕ ಪ್ರಶಸ್ತಿ, ರಾಷ್ಟ್ರಕವಿ ಡಾ.ಜಿ.ಎಸ್.ಶಿವರುದ್ರಪ್ಪ ಕಾವ್ಯ ಪ್ರಶಸ್ತಿಯನ್ನು ಪಡೆದಿರುವ ಪ್ರತಿಭಾ ಸಾರ್ಕ್ ಸಾಹಿತ್ಯ ಸಮ್ಮೇಳನದಲ್ಲಿ ನಡೆದ ಸನ್ಮಾನಕ್ಕೂ ಪಾತ್ರರಾಗಿದ್ದಾರೆ.

'ಅನುದಿನದ ಅಂತರಗಂಗೆ'ಯಲ್ಲಿ ಪ್ರತಿಭಾ ತಮ್ಮ ಜೀವನದಲ್ಲಿ ಕಂಡುಂಡ ತಮ್ಮದೇ ಆದ ಭಾವನೆಗಳನ್ನು ಅನುಭವಗಳನ್ನು ನಿಸ್ಸಂಕೋಚವಾಗಿ, ನಿರ್ಭೀಡೆಯಿಂದ ಹೇಳಿಕೊಳ್ಳುವಂತಹ ದಾಷ್ಟರ್ಯ ಹಾಗೂ ಗಟ್ಟಿತನವನ್ನು ತೋರಿದ್ದಾರೆ. ಇದೇ ನಿರ್ಧಾರವನ್ನು ಎಲ್ಲಾ ಮಹಿಳಾ ಸಾಧಕಿಯರೂ ಸ್ವೀಕರಿಸಿದರೆ ಇನ್ನೂ ಹೆಚ್ಚೆಚ್ಚು ಮಹಿಳಾ ಆತ್ಮಕಥನಗಳು ಸಾಹಿತ್ಯ ಲೋಕವನ್ನು ಸೇರುವ ಸಾಧ್ಯತೆ ಇದೆ.

## ಆ. ಆತ್ಮಕಥನದ ಪರಿಚಯ :

ಕನ್ನಡ ಸಾಹಿತ್ಯ ಲೋಕದಲ್ಲಿ ಬರವಣಿಗೆಯ ಮೂಲಕ ತಮ್ಮದೇ ಆದ ವಿಭಿನ್ನ ಅಸ್ಮಿತೆಯನ್ನು ಕಂಡುಕೊಂಡಿರುವ ಪ್ರತಿಭಾರವರು ಏಪ್ರಿಲ್ ೨೦೧೨ರಲ್ಲಿ ೨೫೩ ಪುಟಗಳನ್ನು ಒಳಗೊಂಡಿರುವ 'ಅನದಿನದ ಅಂತರಗಂಗೆ' ಎಂಬ ಹೆಸರಿನ ಆತ್ಮಕಥನವನ್ನು ಸಾಹಿತ್ಯ ಲೋಕಕ್ಕೆ ಸಮರ್ಪಣೆ ಮಾಡಿದ್ದಾರೆ. ಈ ಕಥನವನ್ನು ತಮ್ಮ ಪತಿಯಾದ ನಂದಕುಮಾರ್‌ಅವರಿಗಲ್ಲದೇ ಬೇರೆ ಯಾರಿಗೂ ಅರ್ಪಿಸುವುದು ಸಾಧ್ಯವೇ ಇಲ್ಲ ಎಂದು ಹೇಳುತ್ತಾ, ತಮ್ಮ ಅಸ್ತಿತ್ವಕ್ಕೆ ಆಕೆಯ ಮಕ್ಕಳಾದ ಅಭಿರಾಮ್ ಮತ್ತು ಭಾಮಿನಿಯರೇ ಕಾರಣ ಎಂದೂ ತಮ್ಮ ಆತ್ಮಕಥನದ ಆರಂಭದಲ್ಲೇ ಹೇಳಿಕೊಂಡಿದ್ದಾರೆ.

'ನನ್ನ ಕವಿತೆಗಳೇ ನನ್ನ ಆತ್ಮಕಥನ' ಎಂದು ನಂಬಿರುವ ಪ್ರತಿಭಾ ತಮ್ಮ ಜೀವನ, ಅದರೊಂದಿಗಿನ ಒಡನಾಟ, ಪ್ರೀತಿಯ ಹುಡುಕಾಟ, ಆ ಹುಡುಕಾಟದಲ್ಲಿ ಪಡೆದಿದ್ದೆಷ್ಟು? ಕಳೆದುಕೊಂಡದ್ದೇನು? 'ಸ್ತ್ರೀ ಲೋಕ' ಯಾವುದನ್ನು ಸದಾ ಮುಚ್ಚಿಡುವ ಪ್ರಯತ್ನವನ್ನು ಮಾಡುತ್ತದೋ ಅದನ್ನು ನೇರವಾಗಿ, ಬಿಡಿ–ಬಿಡಿಯಾಗಿ ವಿವರಿಸಿ ಹೇಳುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ.

ಪ್ರತಿಭಾ ತಮ್ಮ ವೃತ್ತಿ ಜೀವನದ ಆರಂಭದಲ್ಲಿ ಅಗ್ನಿ ಶ್ರೀಧರ್‌ರವರ ಪತ್ರಿಕೆಯಲ್ಲಿ 'ಪ್ರತಿಬಿಂಬ' ಎಂಬ ಅಂಕಣ ಬರಹಗಾರರಾಗಿದ್ದರು. ಆ ಪತ್ರಿಕೆಗೆ ಕೆಲಸ ಮಾಡಿದ್ದು ನನ್ನ

ಬದುಕಿನ ತೃಪ್ತಿಯ ದಿನಗಳಲ್ಲಿ ಅದೂ ಒಂದು ಎಂದು ಹೇಳುತ್ತಾ ಅಗ್ನಿ ಪತ್ರಿಕೆಯನ್ನು ಕುರಿತು ತಮ್ಮ ಅನಿಸಿಕೆಗಳನ್ನು ಹೀಗೆ ಹಂಚಿಕೊಂಡಿದ್ದಾರೆ "ಅಗ್ನಿಯನ್ನು ನನ್ನದೇ ಮಗು ಎನ್ನುವಂತೆ ಹಗಲಿರುಳು ಕೆಲಸ ಮಾಡಿದೆ. ಅದರಿಂದ ನಾನು ಪಡೆದ ತೃಪ್ತಿ ಮತ್ತು ಸಂತೋಷ ಬೇರೆ ಯಾವುದೂ ನೀಡಲಿಲ್ಲ" ಎಂದು ಹೇಳಿದ ಇವರೇ ಕೆಲವು ಕಾರಣಗಳಿಂದ ಅಗ್ನಿ ಪತ್ರಿಕೆಯನ್ನು ಬಿಟ್ಟು ಹೊರಬರಬೇಕಾಯಿತೆಂದು ಹೇಳಿದ್ದಾರೆ. ಆದರೆ ಯಾವ ಕಾರಣಕ್ಕಾಗಿ ಹೊರಬರಬೇಕಾಯಿತು ಎಂಬುದನ್ನು ಎಲ್ಲೂ ಪ್ರಸ್ತಾಪಿಸಿಲ್ಲ.

ಆ ನಂತರ ಹಣಕ್ಕಾಗಿ ಆಕೆ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಭಾಷಾಂತರ, ಜಾಹೀರಾತು, ಹಾಡು, ಸೀರಿಯಲ್‌ಗಳಿಗೆ ಸಂಭಾಷಣೆ, ಸಾಕ್ಷ್ಯ ಚಿತ್ರಗಳಿಗೆ ನಿರೂಪಣೆ ಬರೆಯುವುದು, ಧ್ವನಿ ನೀಡುವುದು, ಇಂಗ್ಲೀಷ್ ಸಬ್ ಟೈಟಲ್ ಮಾಡುವುದು ಹೀಗೆ ನೂರಾರು ಕೆಲಸಗಳನ್ನು ಹುಡುಕಿಕೊಂಡು ಮಾಡಿದರೂ ದಿನದ ೨೪ಗಂಟೆ ಸಾಕಾಗುತ್ತಿರಲಿಲ್ಲ. ಕಾರಣ ಇಂತಹ ಕೆಲಸಗಳಿಗೆ ಸಮಯ ಜಾಸ್ತಿ ಹಿಡಿಯುತ್ತಿತ್ತು. ಸಂಭಾವನೆ ಕಡಿಮೆ ದೊರೆಯುತ್ತಿತ್ತು.

ಆನಂತರ ಜಿ.ಎಸ್.ಸದಾಶಿವರ ಕಾಲದಲ್ಲಿ 'ಕನ್ನಡ ಪ್ರಭಾ' ಪತ್ರಿಕೆಯ ಅಂಕಣವನ್ನು ಬರೆಯುವ ಕೆಲಸ ವಹಿಸಿಕೊಂಡರು. ನಂತರ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಹಿರಿಯ ಸಂಪಾದಕೀಯವಾಗಿ ಕೆಲಸ ಸಿಕ್ಕಿತು. ಅಲ್ಲಿ ಕೆಲಸ ಮಾಡುತ್ತಿದ್ದ ಪ್ರತಿಭಾ ಸಂಬಳ ಹೆಚ್ಚು ಸಿಗುವ ಆಸೆಯಿಂದ ಇಂಡಿಯನ್ ಎಕ್ಸ್‌ಪ್ರೆಸ್ ಬಿಟ್ಟು ಡೆಕ್ಕನ್ ಹೆರಾಲ್ಡ್‌ಗೆ ಸೇರಿಕೊಂಡರು. ನಂತರ ಆ ಕೆಲಸವನ್ನೂ ಬಿಟ್ಟು ಚೆನ್ನೈಗೆ ಹೋಗಿ ನಿರ್ದೇಶಕ ಕೆ.ವಿ.ಆನಂದ್‌ರವರ ಅಸಿಸ್ಟೆಂಟ್ ಆಗಿ ಕೆಲಸವನ್ನು ಮಾಡಿದರು. ಬಿ.ಸರೋಜಾದೇವಿಯವರ ಆತ್ಮಕಥೆಯನ್ನು ತಮಿಳಿನಿಂದ ಕನ್ನಡಕ್ಕೆ ಅನುವಾದವನ್ನೂ ಮಾಡಿದರು. ಹೀಗೆ ಪ್ರತಿಭಾ ತಮ್ಮ ಜೀವನದ ಉದ್ದಕ್ಕೂ ಎಲ್ಲಾ ಬಗೆಯ ವೃತ್ತಿಗಳನ್ನು ಅಳವಡಿಸಿಕೊಂಡ ಪ್ರತಿಭೆಯೇ ಪ್ರತಿಭಾ ನಂದಕುಮಾರ್.

ಇನ್ನು ಪ್ರತಿಭಾರವರ ವೈವಾಹಿಕ ಜೀವನದ ಬಗ್ಗೆ ಹೇಳಬೇಕೆಂದರೆ ಮದುವೆಯಾದ ನಾಲ್ಕು ತಿಂಗಳಿಗೇ ಅನಾರೋಗ್ಯದಿಂದ ಹಾಸಿಗೆ ಹಿಡಿದ ಪತಿಯೊಂದಿಗೆ ವಿಕ್ಟೋರಿಯಾ ಆಸ್ಪತ್ರೆ, ಮದ್ರಾಸಿನ ಸ್ಟ್ಯಾನ್ಲಿ ಆಸ್ಪತ್ರೆ, ಅಪೋಲೊ ಆಸ್ಪತ್ರೆ, ಬಾಂಬೆ ಆಸ್ಪತ್ರೆ ಹೀಗೆ ಆಸ್ಪತ್ರೆಯಿಂದ ಆಸ್ಪತ್ರೆಗಳಿಗೆ ಅಲೆಯಬೇಕಾಯಿತು. 'aortaದ ಬುಡದಿಂದ ಮಿದುಳಿನ ಬುಡದವರೆಗೆ ಕೃತಕ ರಕ್ತನಾಳ ಕೂರಿಸಬೇಕೆಂದು ಹೇಳಿದ ವೈದ್ಯರು ಚಿಕಿತ್ಸೆಗೆ ಸಾಕಷ್ಟು ಹಣ ಭರಿಸಬೇಕಾಗುತ್ತದೆಂದೂ ಹೇಳಿದರು. ಚಿಕಿತ್ಸೆಯ ಖರ್ಚಿಗಾಗಿ ಸಿಕ್ಕ ಸಿಕ್ಕವರ ಬಳಿ ಸಹಾಯ ಬೇಡಿದ ಪ್ರತಿಭಾ ತನ್ನ ಗಂಡ

ಕೆಲಸ ಮಾಡುತ್ತಿದ್ದ ಸಂಸ್ಥೆಯಲ್ಲೂ ೨೦,೦೦೦/– ಹಣ ಕೇಳಿದರು. ಆಗ ಅಲ್ಲಿನ ಛೇರ್‌ಮನ್ "ಈಗ ಸಂಬಳವನ್ನು ಅಡ್ವಾನ್ಸ್ ಆಗಿ ಕೊಟ್ಟು ತಿಂಗಳು ತಿಂಗಳೂ ಹಿಡಿದುಕೊಳ್ಳಕ್ಕೆ ಆತ ಮತ್ತೆ ಕೆಲಸಕ್ಕೆ ಮರಳುತ್ತಾನೆ ಎನ್ನುವ ಗ್ಯಾರಂಟಿ ಏನು? ಹಾಗೆಲ್ಲ ಕೊಡೋಕೆ ಆಗಲ್ಲ"[೪] ಎಂದು ಹೇಳಿ ಕೊನೆಗೆ ಆಫೀಸಿನಲ್ಲಿದ್ದವರ ಬಳಿ ನೂರು–ನೂರು ರೂಪಾಯಿಗಳನ್ನು ಚಂದಾ ಎತ್ತಿ ಕೇವಲ ಒಂದು ಸಾವಿರ ರೂಪಾಯಿ ಕೊಟ್ಟನು.

ಅದನ್ನು ನೋಡಿದ ಪ್ರತಿಭಾ ಬೇಡವೆಂದು ಹೇಳಿ ಆತನ ಟೇಬಲ್ಲಿನ ಮೇಲಿಟ್ಟು ಹೊರಬರಲು ಸಿದ್ಧವಾದಾಗ ಆತ ಇದು ಸ್ವಾಭಿಮಾನದ ಸಮಯವಲ್ಲ ಎನ್ನುತ್ತಾ ಬಲವಂತವಾಗಿ ಆಕೆಯ ಕೈಗೆ ಆ ಹಣವನ್ನು ಕೊಟ್ಟನು. ಮೊಟ್ಟ ಮೊದಲಬಾರಿಗೆ ನನ್ನ ಸ್ವಾಭಿಮಾನವನ್ನು ಪಕ್ಕಕ್ಕೆ ಇಟ್ಟು ತಿರುಪೆ ಬೇಡಿದ ಅನುಭವ ನನಗಾಯಿತು ಎಂದು ಬಹಳ ಬೇಸರದಿಂದ ಹೇಳುತ್ತಾ ಮೊದಲ ಬಾರಿಗೆ ನನಗೆ ಹಣದ ಮಹತ್ವ ತುಂಬಾ ಚೆನ್ನಾಗಿ ಮನದಟ್ಟಾಯಿತು ಎಂದಿದ್ದಾರೆ ಪ್ರತಿಭಾ. ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ತಂದಂತಹ ಘಟನೆ ಇದಾಗಿದೆ ಎಂದೂ ಹೇಳಿಕೊಂಡಿದ್ದಾರೆ.

ಪರಸ್ಪರ ವಿರುದ್ಧ ಗುಣಗಳನ್ನು ಹೊಂದಿರುವ ಪ್ರತಿಭಾ ಹಾಗೂ ನಂದಕುಮಾರ್ ಜಾತಿಯನ್ನು ಮರೆತು ಪ್ರೀತಿ ಮಾಡಿ ವೈವಾಹಿಕ ಜೀವನಕ್ಕೆ ಕಾಲಿಟ್ಟರು. ಅವರ ವೈವಾಹಿಕ ಜೀವನ ಅಷ್ಟು ಸುಖವಾಗಿರಲಿಲ್ಲ. ಮನೆಯಲ್ಲಿ ಸದಾ ಜಗಳ, ಮಾನಸಿಕ ಹಿಂಸೆ, ದೈಹಿಕ ಹಿಂಸೆ, ಕೋಪ, ಅಳು, ಕಿರುಚಾಟ ಜೊತೆಗೆ ಸದಾ ಅನುಮಾನ ಪಡುವಂತಹ ವ್ಯಕ್ತಿತ್ವ ಇವೆಲ್ಲದುದರ ಮಧ್ಯೆ ಜೀವನ ಹೇಗೋ ನಡೆಯುತ್ತಿತ್ತು. ಪ್ರತಿಭಾ ತಮ್ಮ ಪತಿಯ ವೈಯಕ್ತಿಕತೆಗೆ ಗಮನ ಕೊಟ್ಟಷ್ಟು ಆತ ಅವರಿಗೆ ಕೊಡಲೇ ಇಲ್ಲ. ಸದಾ ಸಂಕುಚಿತ ಮನೋಭಾವದ ದೃಷ್ಟಿಕೋನದಿಂದ ಹೆಂಡತಿಯನ್ನು ಪ್ರಶ್ನಿಸುವುದು, ದಂಡಿಸುವುದು, ಮನೆಯಿಂದ ಹೊರಗೆ ಇರುವ ಮೆಟ್ಟಿಲುಗಳ ಮೇಲೆ ಕಾಲ ಕಳೆಯುವಂತಹ ರಾತ್ರಿಗಳು ಸದಾ ಪ್ರತಿಭಾರವರಿಗೆ ಎದುರಾಗುತ್ತಿತ್ತು. ಇದಕ್ಕೆಲ್ಲ ಕಾರಣವಾದ ನಂದಕುಮಾರ್‌ಗೆ ಬುದ್ಧಿಕಲಿಸಬೇಕೆಂದು ಒಂದು ಬಾಡಿಗೆ ಮನೆಯನ್ನು ಮಾಡಿ ಗಂಡನ ಮನೆಯಿಂದ ಹೊರಬಂದರು. ಈ ಸಮಾಜದೊಳಗೆ ಒಂದು ಒಂಟಿ ಹೆಣ್ಣು ಬಾಡಿಗೆ ಮನೆಯನ್ನು ಮಾಡುವ ಸಂದರ್ಭದಲ್ಲಿ ಪ್ರಶ್ನೆಗಳು ಆಕೆಗೆ ಎದುರಾಗುತ್ತದೆ ಎಂಬುದನ್ನು ಈ ಸನ್ನಿವೇಶದಲ್ಲಿ ಸೂಕ್ಷ್ಮವಾಗಿ ನೋಡಬಹುದಾಗಿದೆ.

---

೪. ಅನುದಿನದ ಅಂತರಗಂಗೆ : ಪ್ರತಿಭಾನಂದಕುಮಾರ್; ಪುಟ–೯೮

"ಮನೆ ಅಗ್ರಿಮೆಂಟ್‌ಗೆ ಸಹಿ ಹಾಕಲು ಯಜಮಾನರೇ ಬರಲಿ ಅಂತ ಬಾಡಿಗೆ ಮನೆ ಯಜಮಾನ ಹಠ ಮಾಡಿದರು. ಒಂದು ನಿಮಿಷ ನನಗೆ ಯಾರಾದರೂ ಗೆಳೆಯನನ್ನು ಕರೆದು ಐದು ನಿಮಿಷದ ಮಟ್ಟಿಗೆ ನನ್ನ ಗಂಡನಂತೆ ಅಭಿನಯಿಸಯ್ಯಾ ಅಂತ ಹೇಳೋಣಾ ಅಂದುಕೊಂಡೆ. ನನ್ನ ಗೆಳೆಯನಿಗೆ ಕೇಳಿದೆ. ಅವನು 'ಬಿಲ್‌ಕುಲ್ ಆಗುವುದಿಲ್ಲ, ಹೋಗೇ ಹೋಗೇ, ಕನಸಿನಲ್ಲೂ ಒಂದು ನಿಮಿಷವೂ ನಿನ್ನ ಗಂಡ ಅಂತ ಅಭಿನಯಿಸಕ್ಕೂ ನನಗೆ ಸಾಧ್ಯವಿಲ್ಲ' ಅಂದುಬಿಟ್ಟ.

ಸರಿ ಹಾಳಾಗಿ ಹೋಗು ಅಂದುಕೊಂಡು ಓನರ್ ಹತ್ರ ಹೋಗಿ 'ಯಜಮಾನರಿಗೆ ರಾತ್ರಿ ಫೋನ್ ಮಾಡಿದ್ದೆ, ಅವರು ನೀನೇ ಅಗ್ರಿಮೆಂಟ್ ಮಾಡಿಕೋ ಅಂತ ಹೇಳಿದ್ರು, ಇನ್ನು ಹದಿನೈದು ದಿನ ಬರಲ್ಲವಂತೆ, ಅದಾದ ಮೇಲೆ ಒಳ್ಳೆ ದಿನಗಳು ಇಲ್ಲವಂತೆ' ಅಂದೆ. ನನ್ನ ಅದೃಷ್ಟಕ್ಕೆ ಅವರು ಒಪ್ಪಿಕೊಂಡರು, ಅಡ್ವಾನ್ಸ್ ಕೊಟ್ಟು ಅಗ್ರಿಮೆಂಟ್ ಮಾಡಿಕೊಂಡೆ"[೫]

ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲೂ 'ಕುಟುಂಬ' ಬಹು ಮುಖ್ಯ ಪಾತ್ರ ವಹಿಸುತ್ತದೆ. ಕೌಟುಂಬಿಕ ಸಂಬಂಧಗಳಲ್ಲಿ ಪರಸ್ಪರ ಪ್ರೀತಿ, ಅನ್ಯೋನ್ಯತೆ ಬಹಳ ಮುಖ್ಯವಾಗಿರುತ್ತದೆ. ಸಂಬಂಧಗಳಲ್ಲಿನ ಪ್ರೀತಿ, ವಿಶ್ವಾಸ, ಅನ್ಯೋನ್ಯತೆ, ಒಬ್ಬರು ಮತ್ತೊಬ್ಬರಿಗೆ ನೀಡುವ ಪ್ರೋತ್ಸಾಹ, ಅವರ ವಿಚಾರಧಾರೆಗಳು, ವೈಚಾರಿಕತೆ ಎಲ್ಲವೂ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುತ್ತವೆ. ಸಂಬಂಧಗಳು ಉತ್ತಮವಾದಾಗ ವ್ಯಕ್ತಿ ಪಡೆದುಕೊಳ್ಳುವ ಅನುಭವಗಳು ಸಿಹಿಯಾಗಿರುವಂತೆ, ಹದಗೆಟ್ಟ ಸಂಬಂಧಗಳಾದಾಗ ಎದುರಾಗುವ ಅನುಭವಗಳು ಕಹಿಯೂ ಆಗಿರುತ್ತವೆ.

ಕೂಡು ಕುಟುಂಬದಲ್ಲಿ ಬೆಳೆದ ಪ್ರತಿಭಾರ ತಂದೆ-ತಾಯಿಗಳು ಸುಸಂಸ್ಕೃತರಾಗಿದ್ದು ಮಕ್ಕಳ ಮುಂದೆ ಎಂದೂ ಜಗಳ ಆಡಿದವರಲ್ಲ. ಬೈಗುಳ, ಹೊಡೆತ ಇವೆಲ್ಲ ಮನೆಯಲ್ಲಿ ಅಪ್ಪಿ-ತಪ್ಪಿಯೂ ನಡೆದಿರಲಿಲ್ಲ. ಕತ್ತೆ-ಕೋತಿಯಂತಹ ಪದಗಳನ್ನೂ ಕೇಳಿರದ ವಾತಾವರಣದಲ್ಲಿ ಬೆಳೆದು ಬಂದ ಪ್ರತಿಭಾ ಮೇಲ್ವರ್ಗದ ಹೆಣ್ಣು ಮಗಳು. ಪ್ರೇಮವಿವಾಹವಾಗಿ ಪ್ರೀತಿಯಿಂದ ಸಂಸಾರವನ್ನು ನಡೆಸಬೇಕಾದ ಈಕೆ ಗಂಡನ ಕೈಯಲ್ಲಿ ಹೊಡೆಸಿಕೊಳ್ಳುವುದು; ಮಧ್ಯರಾತ್ರಿಯಲ್ಲಿ ಬೀದಿಗೆ ಬೀಳುವುದು; ರಾತ್ರಿ ೨ ಗಂಟೆಯ ಹೊತ್ತಿನಲ್ಲಿ ಉದರ ಬಾದೆ ತಾಳಲಾರದೇ ರಸ್ತೆಯ ಪಕ್ಕದಲ್ಲಿ ಉಚ್ಚೆ ಮಾಡುವುದು ಇದೆಲ್ಲ ಆಕೆಯ 'ಕುಟುಂಬ ವ್ಯವಸ್ಥೆ'ಯ ಸ್ವರೂಪವನ್ನು ಪ್ರಶ್ನಿಸುವುದಕ್ಕೆ ದಾರಿ ಮಾಡಿಕೊಡುತ್ತದೆ.

---

೫ ಅನುದಿನದ ಅಂತರಗಂಗೆ : ಪುಟ - ೨೨೮

ತನ್ನ ಸ್ನೇಹಿತೆ ಬಸುರಿಯಾದ್ದರಿಂದ ಆಕೆಯ 'ಮೊಪೆಡ್' ಅನ್ನು ಮಾರಿಬಿಡುತ್ತೇನೆಂದು ಹೇಳಿದಾಗ ಪ್ರತಿಭಾ 'ನಾನೇ ಖರೀದಿಸುತ್ತೇನೆಂದು' ಹೇಳಿ ತಮ್ಮ ಮನೆಯ ಮುಂದೆ ಮೊಪೆಡ್‌ಅನ್ನು ತಂದು ನಿಲ್ಲಿಸಿದರು. ಕೆಲಸದಿಂದ ರಾತ್ರಿ ಮನೆಗೆ ಬಂದ ನಂದಕುಮಾರ್ ಅದನ್ನು ಕಂಡು ಯಾರದ್ದೆಂದು ವಿಚಾರಿಸಿ; ಆ ಕ್ಷಣದಲ್ಲೇ ಹಿಂತಿರುಗಿಸಬೇಕೆಂದು ಹಠ ಹಿಡಿಯುತ್ತಾನೆ. ಅದಕ್ಕೆ ಜಗ್ಗದ ಪ್ರತಿಭಾಳಿಗೆ ಬುದ್ಧಿ ಕಲಿಸಬೇಕೆಂದು ಸೀಮೆಎಣ್ಣೆಯನ್ನು ತಂದು ಮೊಪೆಡ್ ಮೇಲೆ ಸುರಿಯಲು ಮುಂದಾಗುತ್ತಾನೆ. ಆಗ ಅದನ್ನು ಕಂಡ ಪ್ರತಿಭಾ ಗಾಬರಿಯಿಂದ ಓಡಿಬಂದು ಸೀಮೆಎಣ್ಣೆ ಸುರಿಯಬೇಡವೆಂದು ಹೇಳುತ್ತಾ ಡಬ್ಬ ಹಿಡಿದು ಜಗ್ಗಾಡುತ್ತಾರೆ.

ಆನಂತರ ನಾಳೆ ಬೆಳಿಗ್ಗೆಯೇ ಹೋಗಿ ಸ್ನೇಹಿತೆಗೆ ಮೊಪೆಡ್ ಅನ್ನು ಹಿಂತಿರುಗಿಸುವುದಾಗಿ ಸಮಾಧಾನ ಮಾಡಿ, ಬೆಂಕಿ ಹಚ್ಚದ ಹಾಗೆ ಸಮಾಧಾನ ಪಡಿಸುತ್ತಾಳೆ. ಜಗಳವೆಲ್ಲ ಮುಗಿದ ಮೇಲೆ ಮಲಗುವುದಕ್ಕಾಗಿ ಕೊಠಡಿಗೆ ಹೋದ ಪ್ರತಿಭಾ ಮೈ ಮೇಲೆ ಚೆಲ್ಲಿದ್ದ ಸೀಮೆಎಣ್ಣೆಯನ್ನು ಗಮನಿಸದೇ ಸೊಳ್ಳೆ ಬತ್ತಿ ಹಚ್ಚಲು ಬೆಂಕಿ ಕಡ್ಡಿ ಗೀರಿದಾಗ ಬೆಂಕಿ ದಗ್ಗನೆ ಹತ್ತಿಕೊಂಡು ಬಿಡುತ್ತದೆ, ಆನಂತರ ಸತತವಾಗಿ ೬ ತಿಂಗಳ ಕಾಲ ಸುಟ್ಟ ದೇಹವನ್ನು ಹೊತ್ತುಕೊಂಡು ಆಸ್ಪತ್ರೆಯಲ್ಲಿ ಕಾಲ ಕಳೆಯಬೇಕಾಯಿತು. ೪೦% ಇಭಾಗ ಸುಟ್ಟ ದೇಹದೊಂದಿಗಿನ ಪಯಣದ ಸುದೀರ್ಘ ದಿನಗಳನ್ನು ತಮ್ಮ ಆತ್ಮಕಥನದೊಳಗೆ ಹೇಳಿದ್ದಾರೆ. ಹೀಗೆ ದೈಹಿಕ ಹಾಗೂ ಮಾನಸಿಕ ಹಿಂಸೆಯ ಸಂದರ್ಭಗಳನ್ನು ತಮ್ಮ ಜೀವನದ ಉದ್ದಕ್ಕೂ ಅವು ಬಂದಂತೆ ಸ್ವೀಕರಿಸಿದ್ದಾರೆ ಪ್ರತಿಭಾ ನಂದಕುಮಾರ್. ಅವರ ವೈವಾಹಿಕ ಜೀವನ ಅಷ್ಟು ಸುಖವಾಗಿರಲಿಲ್ಲ ಎಂಬುದು ಇಂತಹ ಸನ್ನಿವೇಶದ ವ್ಯಕ್ತವಾಗುತ್ತದೆ.

'ನಾಯಿ ಬೆಕ್ಕಿನ ಹಾಗೆ ನಾವಿಬ್ಬರು ಪರಸ್ಪರ ಜಗಳ ಆಡುತ್ತಿದ್ದೆವು' ಎಷ್ಟು ಪ್ರೀತಿ ಇತ್ತೋ ಅಷ್ಟೇ ಜಗಳ, ಮರುಕ್ಷಣವೇ ಮುದ್ದು, ಸಂಧಾನ ಎಂದು ಪ್ರತಿಭಾರವರೇ ತಮ್ಮ ದಾಂಪತ್ಯ ಜೀವನದ ಸಮರ ಹಾಗೂ ಸಮರಸದ ಕ್ಷಣಗಳನ್ನು ಹೇಳಿಕೊಂಡಿದ್ದಾರೆ. ತಮ್ಮ ೪೫ನೇ ವಯಸ್ಸಿನಲ್ಲಿ ತನ್ನ ಗಂಡನ ಎಲ್ಲಾ ಬಗೆಯ ವರ್ತನೆಗಳಿಂದ ಬೇಸತ್ತ ಆಕೆ ಮನೆಯಿಂದ ದೂರ ಉಳಿದಾಗ ನಂದಕುಮಾರ್ "ಮಕ್ಕಳಿಲ್ಲದೆ ಒಂಟಿ ಜೀವನ ನಡೆಸುವುದು ತನಗೆ ಬಹಳ ಕಷ್ಟವಾಗಿದೆ ಮತ್ತೆ ಎಲ್ಲರೂ ಒಟ್ಟಾಗಿರೋಣಾ, ಹಳೆಯದನ್ನೆಲ್ಲ ಮರೆತು ಬಿಡು. ನಮ್ಮ ಸೈಟಿನಲ್ಲಿ ಮನೆ ಕಟ್ಟುತ್ತೇನೆ ಅಲ್ಲಿಗೆ ಎಲ್ಲರೂ ಶಿಫ್ಟ್ ಆಗೋಣಾ" ಎಂದು ಹೇಳಿದಾಗ ಪ್ರತಿಭಾ ನನ್ನದೇನೂ ಅಭ್ಯಂತರವಿಲ್ಲ. 'ಮೊದಲು ಮನೆಕಟ್ಟು ಆಮೇಲೆ ನೋಡೋಣ"[೬] ಆದರೆ ನನ್ನ ಮೇಲೆ

---

೬. ಅನುದಿನದ ಅಂತರಗಂಗೆ: ಪುಟ-೨೫೧

ಯಾವುದೇ ಕಟ್ಟುಪಾಡು, ಒತ್ತಡಗಳನ್ನು ಹೇರಬಾರದೆಂದು ಹೇಳುತ್ತಾರೆ. ಅದಕ್ಕೆ ಒಪ್ಪಿದ ನಂದಕುಮಾರ್ ಮನೆಕಟ್ಟಿ ಗೃಹಪ್ರವೇಶ ಮಾಡಿ ಮತ್ತೆ ಎಲ್ಲರೂ ಒಟ್ಟಿಗೆ ಒಂದೇ ಮನೆಯಲ್ಲಿ ವಾಸಮಾಡಲು ಆರಂಭಿಸಿದಾಗ ಪ್ರತಿಭಾರವರ ಬದುಕು ಒಂದು ಪೂರ್ಣ ವೃತ್ತ ಸುತ್ತಿ ಬಂದಿತು ಎಂದು ತಮ್ಮ ಆತ್ಮಕಥನದ ಅಂತ್ಯದಲ್ಲಿ ಹೇಳಿಕೊಂಡಿದ್ದಾರೆ.

'ಹೆಣ್ಣಿನ ಪ್ರೀತಿಗೆ ಹೆದರುವಷ್ಟು ಅವಳ ದ್ವೇಷಕ್ಕೆ ಹೆದರುವುದಿಲ್ಲ ಗಂಡು' ಎಂಬ ಸಾಲು ಆತ್ಮಕಥನದ ಮುಖ ಪುಟದಲ್ಲಿದೆ. ಅದೂ ಸಹ ಈ ಸಮಾಜದೊಳಗಿರುವ ಹೆಣ್ಣು ಮಕ್ಕಳಿಗೆ ಪ್ರತಿಭಾ ನೀಡಿರುವ ಸಂದೇಶವೆಂದು ಹೇಳಬಹುದು.

ಅನುದಿನದ ಅಂತರಗಂಗೆಯಲ್ಲಿ ಪ್ರತಿಭಾ ಕೆಲವೆಡೆ ತನಗೆ ಇಷ್ಟವಿಲ್ಲದ್ದನ್ನು ನೇರವಾಗಿ ಹೇಳಲಾಗದೆ; ಇಷ್ಟವಾಗದ್ದನ್ನೇ ಒಪ್ಪಿಕೊಂಡು ಮೌನಿಯಾಗುವ ಮಹಿಳೆಗಾಗಿ ಕಂಡು ಬಂದಿರುವುದು 'ಪುರುಷಾಧಿಕಾರದ ಒತ್ತಡದ ಬಲ'ವನ್ನು ವ್ಯಕ್ತಪಡಿಸಿದೆ ಎಂಬುದು ನನ್ನ ಅನಿಸಿಕೆ. ಆಕೆಯ ಆಕಾಂಕ್ಷೆ, ಉದ್ಯೋಗ, ನಿರ್ಧಾರ, ಆಯ್ಕೆ, ಸ್ವಾವಲಂಬನೆ ಇವೆಲ್ಲರ ಮೇಲೆ ಪುರುಷಾಧಿಕಾರದ ಕಾರ್ಯವೇ ಪ್ರಬಲವಾಗಿ ವಿಜೃಂಭಿಸುವಾಗ ಆತನ ಮೊನಚು ಮಾತು, ವ್ಯಂಗ್ಯ, ಆಕ್ರೋಶದ ನುಡಿಗಳು ಆಕೆಗೆ ಉಸಿರುಗಟ್ಟಿಸುತ್ತಿರುತ್ತವೆ. ಆದ್ದರಿಂದಲೇ ಪ್ರತಿಭಾ ಈ ಎಲ್ಲಾ ಒತ್ತಡಗಳಿಂದ ಬಿಡಿಸಿ ಕೊಳ್ಳುವ ಹೊಸ-ಹೊಸ ದಾರಿಗಳನ್ನು ಪ್ರಯತ್ನಗಳನ್ನು ಮಾಡುತ್ತಾ ತಮ್ಮ ಅಸ್ಮಿತೆಯನ್ನು ಉಳಿಸಿಕೊಂಡಿರುವುದನ್ನು ಇಲ್ಲಿ ನೋಡಬಹುದಾಗಿದೆ.

"ಪ್ರತಿಯೊಬ್ಬನ ಬಾಳಿನ ಕತೆಯೂ ಒಂದು ಅತ್ಯುತ್ತಮ ಚರಿತ್ರೆಯಾಗುತ್ತದೆ. ಬರೆಯುವ ಹದವನ್ನು ಬಲ್ಲವನಿಗೆ ಬಾಳೇ ಒಂದು ಕಲೆ, ಅದನ್ನು ಮನೆಯಲ್ಲಿ ಮೂಡಿಸುವುದು ಸೂಕ್ಷ್ಮ ಕಲೆ, ಕುಸುರಿನ ಕೆಲಸ"[೭] ಎಂದು ಬೀಚಿ ತಮ್ಮ ಭಯಾಗ್ರಫಿಯಲ್ಲಿ ಹೇಳಿರುವಂತೆ ಪ್ರತಿಭಾ ಅಂತರಗಂಗೆಯಲ್ಲಿ ಅತ್ಯಂತ ಸುಂದರವಾದ ಕುಸುರಿನ ಕೆಲಸವನ್ನೇ ಮಾಡಿದ್ದಾರೆ. 'ಕಾಲಧರ್ಮ' ಹಾಗೂ 'ಮನೋಧರ್ಮ'ಗಳ ಅನುಭವದ ಅಭಿವ್ಯಕ್ತಿಯೇ ಪ್ರತಿಭಾರವರ ಆತ್ಮಕಥನ.

## ೩. ಅಸ್ಮಿತೆಯ ಹುಡುಕಾಟ :

ಪ್ರತಿಭಾ ನಂದಕುಮಾರರವರು ಬರೆದಿರುವ 'ಅನುದಿನದ ಅಂತರಗಂಗೆ' ಆತ್ಮಕಥನವನ್ನು ನಾನು 'ಆಧುನಿಕ ಪರಿಸರದಲ್ಲಿ ಅಸ್ಮಿತೆಯ ಹುಡುಕಾಟ' ಎಂದು ಕರೆಯಲು ಇಷ್ಟಪಡುತ್ತೇನೆ.

೭. ಬೀಚಿ : ಭಯಾಗ್ರಫಿ- ಮೆಟ್ಟಲೇರುವ ಮುನ್ನ : ಪುಟ ೩

೨೧ನೇ ಶತಮಾನದ ಆಧುನಿಕ ಪರಿಸರದ ಜೀವಿತದೊಳಗೆ ಬದುಕುತ್ತಾ ತನ್ನ ಬದುಕಿನ ವಿವಿಧ ಹಂತದಲ್ಲಿ ಎದುರಾಗುವ ಕೆಲವು ಸನ್ನಿವೇಶ, ಸಂದರ್ಭಗಳಲ್ಲಿ ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳುವ ಹೋರಾಟ ನಡೆಸಿದ್ದಾರೆ. ಪ್ರಸ್ತುತ ನನ್ನ ಈ ಅಧ್ಯಯನದಲ್ಲಿ ಆಧುನಿಕ ಪರಿಸರದೊಳಗೆ ಆಕೆ ಹೇಗೆ ತನ್ನ ಅಸ್ಮಿತೆಯನ್ನು ಕಂಡುಕೊಂಡಿದ್ದಾರೆಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದೇನೆ.

"ಕ್ರೋಬರ್ ಪ್ರಕಾರ ಸಂಸ್ಕೃತಿಯೆನ್ನುವುದು ನಾವು ಕಲಿತ ಹಾಗೂ ಪ್ರಸಾರ ಮಾಡುವ ಸ್ವಭಾವ, ತಂತ್ರವಿಧಾನ, ಚಿಂತನೆ ಮತ್ತು ಮೌಲ್ಯಗಳ ಮೊತ್ತವಾಗಿದೆ. ಇವರ ಪ್ರಕಾರ ಸಂಸ್ಕೃತಿಯು ವಂಶ ಪಾರಂಪರ್ಯದಿಂದ ಬರುವುದಿಲ್ಲ; ಮನುಷ್ಯನ ಕಲಿಕೆಯಿಂದ ರೂಪುಗೊಳ್ಳುತ್ತದೆ. ನಿರಂತರ ಕಲಿಕೆಯೇ ಸಂಸ್ಕೃತಿಯು ಚಲನಶೀಲವಾಗಿಡುತ್ತದೆ. ಈ ಕಲಿಕೆಯಲ್ಲೇ ಸಂಸ್ಕೃತಿಯು 'ಪರಂಪರೆ ಹಾಗೂ ಆಧುನಿಕ' ಎಂಬ ಕವಲನ್ನು ಪಡೆಯುತ್ತದೆ. ಹೀಗಾಗಿ ಇದು ಭೂತ ಮತ್ತು ವರ್ತಮಾನಗಳ ಸಂಬಂಧವನ್ನು ಹೊಂದುತ್ತದೆ. ಸಂಸ್ಕೃತಿ ಎಂಬುದು ಸರ್ವಕಾಲಿಕ ಸತ್ಯವಾದ್ದರಿಂದ ಪರಂಪರೆ ಮತ್ತು ಆಧುನಿಕತೆ ಎರಡರಲ್ಲೂ ಚಲಿಸುತ್ತಿರುತ್ತದೆ."[೮] ಈ ಪರಂಪರೆ ಹಾಗೂ ಆಧುನಿಕತೆ ಎಂಬ ಎರಡು ಸ್ಥಿತಿಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲೇ ಸದಾ ಚಲಿಸುತ್ತಿರುತ್ತದೆ. ಆಧುನಿಕತೆ ಎನ್ನುವುದು ಮೇಲುನೋಟಕ್ಕೆ ಎಲ್ಲಾ ರೀತಿಯ ಸಮಾನವಾದ ಅವಕಾಶವನ್ನು ನೀಡುತ್ತದೆಂಬ ಆಶ್ವಾಸನೆ ನೀಡಿದರೂ ಆಳದಲ್ಲಿ ಪರಂಪರೆ, ಸಂಪ್ರದಾಯದ ಲಕ್ಷಣಗಳನ್ನು ನಾಶವಾಗದಂತೆ ಉಳಿಸಿಕೊಂಡಿದೆ. ಆಧುನಿಕ ಪೂರ್ವ ಸಮಾಜದ ಪರಂಪರೆಯಲ್ಲಿ ಹೆಂಗಸಿನ ಪಾತ್ರವನ್ನು ಖಚಿತವಾಗಿ ವ್ಯಾಖ್ಯಾನಿಸಿ ನಿಯಂತ್ರಿಸುತ್ತಿದ್ದವು. ಆದರೆ ಆಧುನಿಕ ಪರಿಸರದಲ್ಲಿ ಆಕೆ ತನ್ನ ಸಾಮಾಜಿಕ, ಆರ್ಥಿಕ, ಬೌದ್ಧಿಕ ಹಾಗೂ ರಾಜಕೀಯ ಪರಿಸ್ಥಿತಿಗಳನ್ನು ಅರಿತ ಹೆಂಗಸಾಗಿರುವುದರಿಂದ ತನಗೆ ಬೇಕೆನ್ನಿಸಿದಾಗ ಯಾವುದೇ ಹಿಂಜರಿಕೆ ಇಲ್ಲದೇ ತನಗೆ ಅನಿಸಿದ್ದನ್ನು ಮಾಡುತ್ತಾಳೆ. ಇದು ಏಕಕಾಲಕ್ಕೆ ನಮ್ಮ ಪರಂಪರೆಯನ್ನು ಮುರಿಯುವ ಪ್ರಯತ್ನವೂ ಹೌದು; ತನ್ನ ಅಸ್ಮಿತೆಯನ್ನು ಕಂಡು ಕೊಳ್ಳುವ ಮಾರ್ಗವೂ ಹೌದು.

ಆಧುನಿಕತೆ ಸ್ವಾವಲಂಬಿ, ಸ್ವಾತಂತ್ರ್ಯ, ಬಿಡುಗಡೆ ಜೀವನದ ಪಾಠಗಳನ್ನು ಹೆಣ್ಣಿಗೆ ಹೇಳಿಕೊಡುವುದರಿಂದ ಆಕೆಯೂ ಸಹ ಪುರುಷನಂತೆ ಮುಕ್ತವಾಗಿ ಜೀವನ ನಡೆಸುವುದನ್ನು ಈ ಆಧುನಿಕ ಪರಿಸರದೊಳಗೆ ಕಲಿತುಕೊಂಡಿದ್ದಾಳೆ. "ಅಸ್ಮಿತೆ ಎಂಬುದು ಸಮಾಜೋ

---

೮. ಸಂಸ್ಕೃತಿ; ಶ್ರಮ ಮತ್ತು ಸೃಜನಶೀಲತೆ: ಬರಗೂರುರಾಮಚಂದ್ರಪ್ಪ; ಪುಟ-೧೬೭

ರಾಜಕೀಯ ಪರಿಭಾಷೆಯಾಗಿದೆ. ಅದು ಏಕಕಾಲಕ್ಕೆ ವ್ಯಕ್ತಿಯ ಸಾಮಾಜಿಕ ವ್ಯಕ್ತಿತ್ವದ ವಿಭಿನ್ನ ಆಯಾಮಗಳನ್ನು ಪರಿಶೀಲಿಸುತ್ತ ಇದು ಹೇಗೆ ರಾಜಕೀಯವಾಗಿ ಮುಖ್ಯವಾಗುತ್ತಾ ಹೋಗುತ್ತದೆಂಬುದನ್ನು ವಿವರಿಸುವ ಪ್ರಯತ್ನ ಮಾಡುತ್ತದೆ".[೯] ರಾಚನಿಕೋತ್ತರ ಕಾಲಘಟ್ಟದಲ್ಲಿ ಅಸ್ಮಿತೆಯ ಪ್ರಶ್ನೆಗಳು ಬಹಳ ಪ್ರಮುಖವಾಗಿ ಶೋಧನೆಗೆ ಒಳಗಾಗಿದೆ. ಅಸ್ಮಿತೆಯ ಪ್ರಶ್ನೆಯನ್ನು ಆಕೆಯ ಬದುಕಿನ ಅಸ್ತಿತ್ವದ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದು.

ಈ ಕೃತಿಯಲ್ಲಿ ಪ್ರತಿಭಾನಂದಕುಮಾರ್‌ರವರು ವಿಭಿನ್ನ ನೆಲೆಗಟ್ಟಿನಲ್ಲಿ ತನ್ನ ಹೆಣ್ತನದ ಅರ್ಥ ಮತ್ತು ಅದರ ಸಾಮಾಜಿಕ ಸಂರಚನೆ ಮತ್ತು ನಿರಚನೆಯ ವಿಧಾನಗಳನ್ನು ಶೋಧಿಸುತ್ತಾ ಹೋಗುತ್ತಾರೆ. ಹೀಗೆ ಶೋಧಿಸುವ ಪಕ್ರಿಯೆಯಲ್ಲಿ ಅಸ್ಮಿತೆಯ ಪ್ರಶ್ನೆಗಳು ಬಹಳ ಮುಖ್ಯವಾಗಿ ಎತ್ತಲ್ಪಡುತ್ತವೆ. ಅಸ್ಮಿತೆ ಎನ್ನವುದು ಕೇವಲ ಖಾಸಗಿಯಾಗಿ ವ್ಯಕ್ತಿಯ ವ್ಯಕ್ತಿತ್ವಕ್ಕೆ ಮಾತ್ರ ಸಂಬಂಧಿಸಿದ ಪ್ರಶ್ನೆಯೇ ಅಥವಾ ಸಾಮಾಜಿಕವಾದ್ದೇ, ಕೌಟುಂಬಿಕವಾದದ್ದೇ, ರಾಜಕೀಯವಾದದ್ದೇ ಎನ್ನುವ ವಿಭಿನ್ನ ಆಯಾಮಗಳು ಈ ಆತ್ಮಕಥನದಲ್ಲಿ ಅನಾವರಣಗೊಳ್ಳುತ್ತಾ ಹೋಗುತ್ತವೆ.

**"ಆಧುನಿಕತೆ ಎನ್ನುವುದೇ ವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿ ಮತ್ತು ಸಮಾಜದ ಸಂಬಂಧದ ಸ್ವರೂಪ ಇವುಗಳನ್ನು ತೀವ್ರವಾಗಿ ಶೋಧಿಸುವ ಒಂದು ಕಾಲಘಟ್ಟವಾಗಿದೆ. ಏಕೆಂದರೆ ಆಧುನಿಕ ಸಾಮಾಜಿಕ ವಿನ್ಯಾಸಗಳು ಸ್ವಾತಂತ್ರ್ಯ ಅವುಗಳು ವಾಸ್ತವವಾಗುವ ವಿಧಾನಗಳನ್ನು ರೂಪಿಸುವ ಕಾರ್ಯದಲ್ಲಿ ತೊಡಗುತ್ತದೆ. ಆದರೆ ಭಾರತೀಯ ಸಾಮಾಜಿಕ ರಚನೆಯ ಒಳಗೇ ಹೆಣೆಯಲ್ಪಟ್ಟಿರುವ ಪಿತೃಪ್ರಾಧಾನ್ಯತೆ ಮತ್ತು ಪಾರಂಪರಿಕ ಮೌಲ್ಯಗಳು ಆಧುನಿಕ ಮೌಲ್ಯಗಳೊಡನೆ ಮುಖಾಮುಖಿಯಾದಾಗ ಸಂಘರ್ಷವೊಂದು ಏರ್ಪಡುತ್ತದೆ. ಈ ಸಂಘರ್ಷ ವ್ಯಕ್ತಿಯ ಸಾಮಾಜಿಕ ರಚನೆಯಲ್ಲಿ ದೊಡ್ಡದೊಂದು ತೊಡಕನ್ನು ಉಂಟುಮಾಡುತ್ತದೆ".[೧೦]**

ಸಮಾಜ ಚಲನಶೀಲವಾದುದರಿಂದ ಹಳೆಯದನ್ನೇ ಮುಂದುವರಿಸಿಕೊಂಡು ಹೋಗಲು ಸಾಧ್ಯವಾಗುವುದೇ ಇಲ್ಲ ನಮ್ಮ ಜೀವನ ವಿಧಾನ ಬದಲಾವಣೆಯಾದಂತೆಲ್ಲ ನಮಗರಿವಿಲ್ಲದ ಹಾಗೆ ಆಧುನಿಕತೆ ನಮ್ಮ ಬದುಕಿನಲ್ಲಿ ಪ್ರವೇಶಿಸುವಂತಾಗುತ್ತದೆ.

---

೯. modernity, postmodernity and Neo-sociological theories-page no-243

೧೦. ಅದೇ –೬೭

"ಪ್ರತಿಯೊಬ್ಬ ವ್ಯಕ್ತಿಯೂ ಬದಲಾವಣೆಗೆ ಒಳಗಾಗುವುದರ ಮೂಲಕ ಆಧುನಿಕತೆಯನ್ನು ಅನುಭವಿಸುತ್ತಾನೆ"[೧೧] ಎಂಬುದನ್ನು ಪ್ರತಿಭಾರವರ ಮಗನಾದ ಅಭಿರಾಮ್ ಮಾತುಗಳಲ್ಲಿ ನೋಡಬಹುದಾಗಿದೆ. ಪ್ರತಿಭಾ ತಮ್ಮ ವೈಯಕ್ತಿಕ ಜೀವನದಲ್ಲಿ ಆದ ಘಟನೆಯನ್ನು ಆಕೆಯ ಮಗನ ಹತ್ತಿರ ಹೇಳಿಕೊಂಡು ದುಃಖ ಪಟ್ಟಾಗ ಆತ "ಅದಕ್ಯಾಕೆ ಇಷ್ಟು ಅಪ್‌ಸೆಟ್ ಆಗ್ತೀಯಾ. ಬಿಡು ನಿನ್ನ ಆತ್ಮಕತೆಯಲ್ಲಿ ಎಲ್ಲ ಬರೆದು ಬಿಡು"[೧೨] ಎಂದು ಹೇಳಿದ. ಹೀಗೆ ತಾಯಿಗೆ ಮಗನೊಬ್ಬ ಎಲ್ಲವನ್ನೂ ಮುಕ್ತವಾಗಿ ಬರೆದು ಬಿಡು ಎಂದು ಹೇಳುವುದೇ ಆಧುನಿಕ ಪರಿಸರದ ಅತೀ ದೊಡ್ಡ ಬದಲಾವಣೆ. ತನ್ನ ಸರಿ–ತಪ್ಪುಗಳ ನಡುವೆ ತನ್ನ ಅಸ್ಮಿತೆಯ ಹುಡುಕಾಟವನ್ನು ತಮ್ಮ ಆತ್ಮಕಥನ ಬರೆಯುವ ಮೂಲಕ ಪ್ರತಿಭಾ ಕಂಡುಕೊಂಡಿದ್ದಾರೆ.

ತನ್ನ ಆತ್ಮಕಥನವನ್ನು ಪ್ರತಿಯೊಬ್ಬರೂ ಓದುತ್ತಾರೆಂದು ತಿಳಿದಿದ್ದರೂ ತನ್ನ ದೈಹಿಕ ಸಂಬಂಧದ ಬಗೆಗೆ ಮುಕ್ತವಾಗಿ ಬರೆದುಕೊಂಡಿರುವುದೇ ಆಧುನಿಕ ಪರಿಸರ ಕಲಿಸಿಕೊಟ್ಟ ಶಿಕ್ಷಣದಿಂದ ಆಗಿರುವ ಹೊಸ ಬದಲಾವಣೆ ಎಂಬುದು ನನ್ನ ಅಭಿಪ್ರಾಯ ಪಿತೃಪಾಧಾನ್ಯತೆ ನಿರಂತರವಾಗಿ ಹೆಣ್ಣಿನ ದೇಹದ ಮೇಲೆ ನಿಯಂತ್ರಣ ಹೇರುವ ಕೆಲಸ ಮಾಡುತ್ತಿರುತ್ತದೆ. ಇದರ ಮುಖ್ಯವಾದ ಲಕ್ಷಣ ಏನೆಂದರೆ ಮದುವೆಯಾದ ಹೆಣ್ಣು ಆಕೆಯ ಪತಿಗೆ ಮಾತ್ರ ಮೀಸಲೆಂದು ಪರಂಪರೆ ಹೇಳುತ್ತಿರುತ್ತದೆ. ಆದರೆ ಪ್ರತಿಭಾ ತನಗೆ ಬೇಕಾದ ಲೈಂಗಿಕ ಸ್ವಾತಂತ್ರ್ಯವನ್ನು ಈ ಪರಿಸರದೊಳಗೆ ಪಡೆದುಕೊಳ್ಳುತ್ತಿರುವುದನ್ನು 'ಅನ್ವೇ' ಪ್ರಸಂಗದಲ್ಲಿ ನೋಡಬಹುದು. ಸಾಮಾಜಿಕವಾಗಿ ಹೆಣ್ಣಿನ ದೇಹ ಪರಂಪರೆಯೊಂದಿಗೆ ಹೇಗೆ ವರ್ತಿಸಬೇಕೆಂದು ಸದಾ ಹೇಳುತ್ತಿರುತ್ತದೆ. ಹೀಗೆ ಹೇಳುವ ರೀತಿಯಲ್ಲಿ ಹೆಣ್ಣನ್ನು ಇಂದಿಗೂ ನಮ್ಮ ಸಮಾಜ ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದೆ.

ತನ್ನ ದೇಹವನ್ನು ತನಗೆ ಇಷ್ಟಬಂದಂತೆ ಇಂದು ಮಹಿಳೆ ಬಳಸಿಕೊಳ್ಳುವ ಸ್ವಾತಂತ್ರ್ಯವನ್ನು ಪಡೆದುಕೊಂಡಿದ್ದಾಳೆ. ಇದು ಪುರುಷನೊಂದಿಗೆ ಮಹಿಳೆ ನಡೆಸುವ ಸ್ಪರ್ಧೆಯಲ್ಲ ಬದಲಿಗೆ ಈ ಸಮಾಜದ ನೀತಿ–ನಿಯಮ, ಕಟ್ಟಳೆ ಎಂಬ ಬಂಧನದಿಂದ ಆಕೆ ಬಿಡಿಸಿಕೊಳ್ಳುವ ಪ್ರಯತ್ನವನ್ನು ಸದಾ ಮಾಡುತ್ತಿರುತ್ತಾಳೆಂಬುದು ಇಲ್ಲಿ ತಿಳಿದು ಬರುತ್ತದೆ. ಒಬ್ಬ ಪುರುಷ ತನ್ನ ಲೈಂಗಿಕ ವಿಷಯಗಳನ್ನು ಮುಕ್ತವಾಗಿ ಬರೆದುಕೊಳ್ಳುವಂತೆ ಪ್ರತಿಭಾ ನಂದಕುಮಾರ್ ಸಹ ತಮ್ಮ ಆತ್ಮಕಥನದೊಳಗೆ ತನ್ನೆಲ್ಲಾ ಪ್ರೇಮ ಪ್ರಸಂಗಗಳನ್ನು, ತನ್ನ ಪ್ರೇಮ

---

೧೧ ಸಾಹಿತ್ಯ ಮತ್ತು ಕ್ರಿಯಾಶೀಲತೆ: ಡಾ.ಜಿ.ಆರ್. ತಿಪ್ಪೇಸ್ವಾಮಿ

೧೨ ಅನುದಿನದ ಅಂತರಗಂಗೆ: ಪು.ಸಂ.೧೩

ಪತ್ರಗಳ ನಿವೇದನೆಯನ್ನು, ಉತ್ಕಟವಾದ ಪ್ರೀತಿಯನ್ನು ಹೇಳಿಕೊಂಡಿದ್ದಾರೆ. ಅದಕ್ಕೊಂದು ಸಾಕ್ಷಿಯಾದ ಮಾದರಿ ಪ್ರೇಮ ಪತ್ರ ಇಲ್ಲಿದೆ:-

ಒಮ್ಮೆ ಪ್ರತಿಭಾ ಕೇರಳದ ಕೊಚ್ಚಿನ್‌ನಲ್ಲಿ ಒಂದು ರಾಷ್ಟ್ರೀಯ ಸೆಮಿನಾರ್‌ಗೆ ಹೋಗಿದ್ದಾಗ 'ಆನ್ಬೇ' ಎಂಬ ೬೩ ವಯಸ್ಸಿನ ಹಿರಿಯ ಸಾಹಿತಿ ಪರಿಚಯವಾದರು. ಅವರ ಪರಿಚಯ ೩೫ ರ ಹರೆಯದ ಪ್ರತಿಭಾರವರೊಂದಿಗೆ ಪ್ರೀತಿಯಾಯಿತು. ಆ ವಯಸ್ಸಿನ ಪ್ರೀತಿ ಬಗ್ಗೆ "ಮೊದಲ ಬಾರಿ ನನ್ನ ಅಸ್ತಿತ್ವವನ್ನೇ ಅಲುಗಾಡಿಸಿದ ಅನುಭವ ನನಗಾಯಿತು"[೧೩] ಎಂದು ಹೇಳಿಕೊಂಡಿದ್ದಾರೆ.

ಪುಟ್ಟ ನಾಯಿ ಮರಿ ಇರುವ ಗ್ರೀಟಿಂಗ್ ಕಾರ್ಡ್ ಒಂದರೊಳಗೆ "ನಾನು ನಿಮ್ಮನ್ನು ಹಿಂಬಾಲಿಸಿದರೆ ನೀವು ನನ್ನನ್ನು ಇಟ್ಟು ಕೊಳ್ಳುತ್ತೀರಾ? ಎನ್ನುವ ಕೋರಿಕೆಯನ್ನು ಬರೆದುಕೊಟ್ಟಿದ್ದರು ಪ್ರತಿಭಾ. ಅದಕ್ಕೆ ಉತ್ತರವಾಗಿ ಆನ್ಬೇ 'No' ಎಂದರು, 'ಯಾಕೆ' ಅಂದೆ 'Because you are not a dog! ಅಂದರು ಹಾರಿ ಕುಣಿದು ಕುಪ್ಪಳಿಸಿ ಅವರ ಕೊರಳಿಗೆ ಜೋತುಬಿದ್ದು ಮುದ್ದು ಮಾಡಿ ಕೇಳಿದೆ 'ನಾನು ನಿಮ್ಮ ನಾಯಿ ಮರಿ ಆಗಿರಲೇ?'

ನನ್ನನ್ನು ನಾಯಿ ಮಾಡಿಕೊಳ್ಳಿ' ಅಂದೆ.

'ಸಾಧ್ಯವಿಲ್ಲ'

ಯಾಕೆ'

'ನಾಯಿಗೆ ನಿನ್ನಷ್ಟು ಪ್ರೀತಿ ಬರುವುದಿಲ್ಲ"[೧೪]

ಈ ಮೇಲಿನ ಸಂಭಾಷಣೆಯನ್ನು ನೋಡಿದಾಗ ಒಂದು ಹೆಣ್ಣು ಮತ್ತೊಬ್ಬ ವ್ಯಕ್ತಿಯೊಂದಿಗೆ ಮುಕ್ತವಾಗಿ ಪ್ರೀತಿಯಿಂದ ಈ ರೀತಿ ಮಾತನಾಡುವುದು, ಆತನೊಂದಿಗೆ ಮುಕ್ತವಾಗಿ ಸಂಬಂಧವನ್ನು ಇಟ್ಟು ಕೊಂಡಿದ್ದೇನೆಂದು ಹೇಳಿಕೊಳ್ಳುವುದೇ ಆಧುನಿಕತೆಯೇ?

ವಿವಾಹಿತವಾದ ಹೆಣ್ಣು ಮಗಳು ಯಾಕೆ ಹೊರಗೆ ಪ್ರೀತಿಯನ್ನು ಹುಡುಕುತ್ತಿದ್ದಾಳೆ. ಆಕೆಯ ಕುಟುಂಬದೊಳಗೇ ಇರುವ ಆತನ ಗಂಡ ಆಕೆಗೆ ಪ್ರೀತಿಕೊಡಲು ಸಾಧ್ಯವಿಲ್ಲವೇ.

---

೧೩. ಅನುದಿನದ ಅಂತರಗಂಗೆ: ಪು.ಸಂ:೬೯

೧೪. ಅದೇ: ಪು.ಸಂ: ೬೯

'ಮದುವೆ' ಎಂಬ ಸುರಕ್ಷಿತ ವಲಯದಲ್ಲೇ ಆಕೆಗೆ ದೈಹಿಕ ಮತ್ತು ಮಾನಸಿಕ ಸಾಂತ್ವಾನ, ನೆಮ್ಮದಿಗೆ ಕಾರಣವಾಗುವ ಅಂಶಗಳು ಲಭ್ಯವಾಗುತ್ತವೆಯೇ, ಎನ್ನುವ ಪ್ರಶ್ನೆ ಮುಖ್ಯವಾಗುತ್ತದೆ. ಕುಟುಂಬದೊಳಗಿನ ಗಂಡು-ಹೆಣ್ಣಿನ ಸಂಬಂಧವನ್ನು ಯಾಕೆ ಈ ಸಮಾಜ ಒಪ್ಪಿಕೊಂಡಿದೆ? ಅದನ್ನು ಹೇಗೆ ನಾವು ಅರ್ಥಮಾಡಿಕೊಂಡಿದ್ದೇವೆ? ಅದು ಕೇವಲ ಪ್ರೀತಿನಾ ಶೋಷಣೆಯಾ? ದೌರ್ಜನ್ಯನಾ? ದಮನವಾ? ಅಥವಾ ಇವೆಲ್ಲವನ್ನು ಒಳಗೊಂಡಿರುವ ವ್ಯವಸ್ಥೆನಾ? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ. ನನ್ನ ಪ್ರಕಾರ 'ಆಧುನಿಕತೆ' ಎನ್ನುವುದೇ ಪೂರ್ಣವಾಗಿ ದೋಷಾತೀತವಾದುದು. ನಮ್ಮ ಮುಂದೆ ಇಷ್ಟು ಬದಲವಣೆಯನ್ನು ಕಂಡು ಬೆಳೆದು ನಿಂತಿರುವ ಜಗತ್ತಿನ ನಡಾವಳಿಗಳೇ ಆಧುನಿಕತೆಯ ಮುಖವನ್ನು ಅಭಿವ್ಯಕ್ತಗೊಳಿಸುತ್ತದೆ. ಪರಂಪರೆಯ ವಿರುದ್ಧ ದಿಕ್ಕಿನಲ್ಲೇ ಚಲಿಸುವ ಈ ಆಧುನಿಕ ಪರಿಸರದೊಳಗೆ ಪ್ರತಿಭಾ ತಮ್ಮ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಈ ಮೂಲಕ ಮಾಡಿದ್ದಾರೆ.

ತನ್ನ ಸುತ್ತಲಿನ ಪರಿಸರ ತನ್ನ ಸ್ಥಿತಿಗತಿಗಳನ್ನು ಕಂಡು ಆಲೋಚಿಸಿ ಸ್ಥಗಿತ ಮೌಲ್ಯಗಳನ್ನು ನಿರಾಕರಿಸುವ ಬರವಣಿಗೆ ಹಿಂದೆ ಇದ್ದ ಸ್ತ್ರೀ ಲೇಖಕಿಯರಿಗೆ ಸಾಧ್ಯವಾಗಿತ್ತು; ಅವರೆಲ್ಲ ನಮ್ಮ ಪರಂಪರೆಯ ಮೌಲ್ಯಗಳನ್ನು ಪ್ರಶ್ನಿಸಿದ್ದಾರೆ **"ಹೆಣ್ಣು ಪತಿವ್ರತೆಯಾಗುವ ಮೂಲಕ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾಳೆ. ಅನೇಕ ತರದ ಸಂಯಮ, ಅದರಲ್ಲೂ ಕಾಮನಿಯಂತ್ರಣದಿಂದ ಅವಳ ಶಕ್ತಿ ಹೆಚ್ಚುತ್ತದೆ"**[೧೫] ಎಂದು ಪರಂಪರೆ ಹೆಣ್ಣಿನ ದೇಹದ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಿದ್ದರೂ ಅದನ್ನೆಲ್ಲ ಕಿತ್ತೊಗೆಯುವ ಪ್ರಯತ್ನವನ್ನು ಪ್ರತಿಭಾ ಮಾಡಿದ್ದಾರೆ. ನನಗೆಒಂದು ಮುತ್ತು ಕೊಡು ಎಂದು ವಿವಾಹಿತ ಪುರುಷರ ಬಳಿ ಕೇಳಿದಾಗ ಅವರೆಲ್ಲ ಆಕೆಗೆ ಯಾವುದೋ, ಬಸ್ ಸ್ಟಾಂಡ್‌ನಲ್ಲೋ, ಹೋಟೆಲ್‌ನಲ್ಲೋ, ಮತ್ತೆಲ್ಲೋ ಆಕೆ ಕೇಳುವ ಮುತ್ತನ್ನು ಕದ್ದು ಕೊಡುತ್ತಾರೆ. ಪ್ರತಿಭಾರ ಗೆಳೆಯರೆಲ್ಲ ಮುದುವೆಯ ಚೌಕಟ್ಟಿನಲ್ಲಿ ಲೈಂಗಿಕತೆ ಸರಿ; ಅದರಾಚೆಗೆ ಅದು ಸರಿಯಲ್ಲ ಎಂಬ ದೃಷ್ಟಿ ಉಳ್ಳವರಾಗಿದ್ದಾರೆ. ಮದುವೆಗೂ ಲೈಂಗಿಕತೆಗೂ ಇರುವ ಸಂಬಂಧ ಎಂತದ್ದು? ಅದು ಯಾಕೆ ಕುಟುಂಬದ ಒಳಗೇ ಸರಿ ಎನ್ನುತ್ತೆ? ಆಕೆಯ ಮೇಲೆ ಮತ್ತೆ ಮತ್ತೆ ಒತ್ತಡವನ್ನು ಹೇರಲ್ಪಡುತ್ತದೆ?

ಹೆಣ್ಣಿಗೆ ಹೇಳಿಕೊಟ್ಟ ಸ್ಥಗಿತ ಮೌಲ್ಯಗಳಾದ ಪತಿಯೇ ಪರದೈವ, ಗಂಡನೇ ತನ್ನ ಪ್ರಪಂಚ, ಆತನೇ ತನ್ನ ಸರ್ವಸ್ವ, ಆತನನ್ನು ಬಿಟ್ಟು ಬಾಳುವುದು ತಪ್ಪು, ಅವನು ಎಷ್ಟೇ ಹಿಂಸೆಕೊಟ್ಟರೂ ಸಹಿಸಿಕೊಂಡು ತಾಳ್ಮೆಯಿಂದ ಆತನೊಂದಿಗೇ ಕೊನೆ ಉಸಿರು ಇರುವ ವರೆಗೂ

---

೧೫. ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ: ಸುಧಾಸೀತಾರಾಮನ್; ಪುಟ:೨೨

ಬದುಕಬೇಕು ಹೀಗೆ ಪರಂಪರಾಗತವಾಗಿ ಬಂದಿರುವ ಹೇಳಿಕೆಗಳ ಸುಳಿಯಲ್ಲಿ ಪ್ರತಿಭಾ ಎಂದು ಸಿಲುಕಿದ್ದವರಲ್ಲ. ಬದಲಿಗೆ ಈ ವ್ಯವಸ್ಥೆಯ ವಿರುದ್ಧವೇ ತನ್ನ ವ್ಯಕ್ತಿತ್ವವನ್ನು ಮತ್ತಷ್ಟು ಗಟ್ಟಿ ಮಾಡಿಕೊಂಡರು. ಆಕೆ ಗಂಡನೊಂದಿಗೆ ಸಂಸಾರ ಮಾಡುತ್ತಿರುವಾಗಲೇ ಪರ ಪುರುಷನೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದರು; ಆತ ಬದುಕಿರುವಾಗಲೇ ಮತ್ತೊಬ್ಬ ಪುರುಷನ ದೈಹಿಕ ಸಂಪರ್ಕವನ್ನು ಹೊಂದಿದ್ದರು. ಇದೂ ಸಹ ಆಕೆಗೆ ಆಧುನಿಕ ಪರಿಸರ ತನ್ನದೇ ಆದ ಒಂದು ವೈಯಕ್ತಿಕ ಬದುಕನ್ನು ಕಟ್ಟಿಕೊಳ್ಳುವಂತಹ ಮಾರ್ಗವನ್ನು ತೋರಿಸಿಕೊಟ್ಟಿದೆ ಎಂಬುದು ನನ್ನ ಅಭಿಪ್ರಾಯ, ಈ ಪರಿಸರದೊಳಗೆ ಇದನ್ನೆಲ್ಲ ಸಹಜವಾದ ಹೆಣ್ಣು-ಗಂಡಿನ ಸಂಬಂಧ ಎಂದೇ ಪರಿಗಣಿಸಲಾಗುತ್ತಿದೆ.

ಇಷ್ಟೆಲ್ಲ ವಿರೋಧಗಳ ಮಧ್ಯೆಯೂ ಪ್ರತಿಭಾ ಇಂದಿಗೂ ಆಕೆಯ ಗಂಡನೊಂದಿಗೇ ಬದುಕುತ್ತಿದ್ದಾರೆ. **"ವಿವಾಹ ಮಾತ್ರವೇ ಹೆಣ್ಣಿನ ಸಾಮಾಜಿಕ ಅಸ್ಮಿತೆಯನ್ನು ದೃಢ ಪಡಿಸುವುದರಿಂದ, ಸಾಮಾಜಿಕ ಮನ್ನಣೆಗಳಿಸುವಲ್ಲ ಅದರ ಪಾತ್ರದೊಡ್ಡದು"**[೧೬] ಎಂಬುದಕ್ಕೆ ಪ್ರತಿಭಾ ಜೋತುಬಿದ್ದು ವಿವಾಹ ಹಾಗೂ ಕುಟುಂಬ ಎಂಬ ವ್ಯವಸ್ಥೆಗೆ ಅನಿವಾರ್ಯತೆಯಿಂದ ಅಂಟಿಕೊಂಡಿದ್ದರೇ? ಅದು ಅಗತ್ಯವೇ? ಇದೆಲ್ಲ ಕುಟುಂಬದ ಒಳಗಿರುವ ಸಂಬಂಧದ ಸಂಕೀರ್ಣತೆಯನ್ನು ಹೇಳುತ್ತದೆ. ತನ್ನ ಗಂಡ ತನಗೆ ಎಷ್ಟೇ ಕಷ್ಟಕೊಟ್ಟರೂ ಅದನ್ನು ಸಹಿಸಿಕೊಂಡು ಆತನೊಂದಿಗೇ ಇದ್ದು ಬಿಡುವುದು ಪ್ರತಿಭಾರವರಿಗೆ ಇದ್ದ ಒಂದು ಚಟವೇ? ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ. ಆಕೆಗೆ ಕಲಿಸಿಕೊಟ್ಟಿದ್ದು ಆಕೆಯ ಒಳಗಿರುವ ಸಂಸ್ಕೃತಿಯೇ ಎಂಬ ಅನಿಸಿಕೆಯೂ ನಮ್ಮಲ್ಲಿ ಮೂಡುತ್ತದೆ. ಆಕೆಯ ಒಳಗೇ ಆಧುನಿಕತೆ ಅಡಗಿದ್ದರೂ ಅದು ಒಂದು ಹಂತದ ಸಹಿಸುವಿಕೆಯ ನಡುವೆಯೇ ಆಕೆ ತನ್ನ ಬೇರೆ-ಬೇರೆ ಚಟುವಟಿಕೆಗಳನ್ನು ಆ ಪರಿಸರದೊಳಗೇ ನಡೆಸುತ್ತಿದ್ದಳು. ಈ ಹಂತದಲ್ಲೇ ಸುಳ್ಳು-ನಿಜಗಳಿಗೆ ವ್ಯತ್ಯಾಸಗೊತ್ತಾಗದಷ್ಟು ತಮ್ಮ ಪತಿಗೆ ಹೆಚ್ಚೆಚ್ಚು ಸುಳ್ಳುಗಳನ್ನು ಹೇಳುವುದರಲ್ಲಿ ಆಕೆ 'Expert' ಆಗಿಬಿಟ್ಟಿದ್ದರಂತೆ ಎಂಬುದಕ್ಕೆ ಅವರೇ ಹೇಳಿಕೊಂಡಿರುವ ಈ ಕೆಳಗಿನ ಸಾಲುಗಳು ಸಾಕ್ಷಿಯಾಗಿದೆ:-

"ನಿಜ ಸಂಗತಿ ಹೇಳಿದರೆ ಅವನಿಗೆ ಕೋಪ ಬರುತ್ತೆ, ಹಾಗಾಗಿ ಒಂದು ಸುಳ್ಳು ಹೇಳಿದರೆ ಏನೀಗ? ಮನೆಯಲ್ಲಿ ಗಲಾಟೆಯೂ ಇರಲ್ಲ. ಶಾಂತಿ ಇರುತ್ತೆ, ಜೊತೆಗೆ ನನಗೆ ಪ್ರತಿಯೊಂದು ಸಣ್ಣ ವಿಷಯಕ್ಕೂ ಹೋರಾಡಿ ಶಕ್ತಿ ವ್ಯಯ ಮಾಡ ಬೇಕಾಗಿರಲ್ಲ, ಹಾಗಾಗಿ ಧಾರಾಳವಾಗಿ ಸುಳ್ಳು

---

೧೬. ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ: ಪುಟ:೨೨

ಹೇಳ ತೊಡಗಿದೆ.  ಬರಬರುತ್ತಾ ಅದರಲ್ಲಿ ಎಷ್ಟು Expert ಆಗಿಬಿಟ್ಟೆ ಎಂದರೆ ನನ್ನ ಸುಳ್ಳುಗಳನ್ನು ನಾನೇ ನಿಜವೆಂದು ನಂಬುವಷ್ಟು![೧೭]

ಹೆಣ್ಣನ್ನು 'ಅರ್ಥಮಾಡಿಕೊಳ್ಳಲಾಗದ' ಈ ಪುರುಷ ಪ್ರಧಾನ ಜಗತ್ತಿನ ಒಡೆಯನಂತೆ ಮೆರೆಯುವ ಗಂಡಸು ತನ್ನ ಬೌದ್ಧಿಕ ಕೊರತೆಯನ್ನು ಮರೆಮಾಚಲು, ತನ್ನಲ್ಲೇ ಇರುವ ದಡ್ಡತನವನ್ನು, ನ್ಯೂನತೆಗಳನ್ನು ಒಪ್ಪಿಕೊಳ್ಳುವ ಬದಲು, ತನ್ನ ಹೊರಗೆ ಒಂದು 'ರಹಸ್ಯ' ಇದೆ ಎಂದು ಗ್ರಹಿಸುತ್ತಾನೆ.ಈ ನೆಪಗಳ ಮೂಲಕ ತನ್ನ ಸೋಮಾರಿತನ ಮತ್ತು ತನ್ನ ಒಣ ಜಂಭಗಳನ್ನು ಪೋಷಿಸಿಕೊಳ್ಳುತ್ತಿರುತ್ತಾನೆ. ಎಂಬುದನ್ನು ನಂದಕುಮಾರ್ ಆಸ್ಪತ್ರೆಗೆ ಸೇರಿದ ಸಂದರ್ಭದಲ್ಲಿ ಆತ ಪ್ರತಿಭಾರವರಿಗೆ ಕೇಳಿದ ಪ್ರಶ್ನೆಗಳಲ್ಲೇ ಈ ಪುರುಷಜಗತ್ತಿನ, ಪಿತೃಪ್ರಧಾನತೆ ಲೋಕದ ಹಿತಾಸಕ್ತಿಗಳೇನು ಎಂದು ತಿಳಿಯುತ್ತದೆ.

"ನಾನು ನಾಳೆ ಆಪರೇಷನ್ನಲ್ಲಿ ಸತ್ತು ಹೋದರೆ; ನೀನೂ ಸತ್ತು ಹೋಗಬೇಕು. ಹಾಗಂತ ಪ್ರಾಮಿಸ್ ಮಾಡು.  ಹುಟ್ಟಿದ್ದು ನನಗಾಗಿ ಮಾತ್ರ.  ನಾನು ಸತ್ತ ಮೇಲೆ ನೀನು ಬೇರೆ ಯಾರಿಗೂ ಸೇರಬಾರದು.  ಬೇರೆ ಯಾರನ್ನೂ ಪ್ರೀತಿಸಿ ಮದುವೆ ಯಾಗಬಾರದು.  ನಾನು ಸತ್ತ ಸುದ್ದಿ ತಿಳಿದ ತಕ್ಷಣ ನೀನು ಆತ್ಮಹತ್ಯೆ ಮಾಡಿಕೊಳ್ಳಬೇಕು.  ಹಾಗಂತ ಪ್ರಾಮಿಸ್‌ಮಾಡು"[೧೮] ಎಂದು ಪ್ರತಿಭಾರವರ ಬಳಿ ಮಾತು ತೆಗೆದುಕೊಂಡಿದ್ದರು ನಂದಕುಮಾರ್. ಪ್ರತಿಭಾ ಹಾಗೂ ನಂದಕುಮಾರ್ 'ಕುಟುಂಬ' ಎಂಬ ವ್ಯವಸ್ಥೆಯೊಂದಿಗೆ ತಮ್ಮನ್ನು ತಾವೇ ಬಂಧಿಸಿಟ್ಟಿಕೊಂಡಿದ್ದರೇ? ಎಂಬ ಪ್ರಶ್ನೆ ಈ ಮೇಲಿನ ಸಾಲುಗಳನ್ನು ಓದುವ ಸಂಧರ್ಭದಲ್ಲಿ ಮೂಡುತ್ತದೆ.  "ಕುಟುಂಬ ಸಮಾಜದ ಮೂಲ ಘಟಕ ಭಾರತೀಯ ಸಂದರ್ಭದಲ್ಲಿ ಕುಟುಂಬವು, ಜಾತಿ ಮತ್ತು ಬಂಧುತ್ವ ಸಂಬಂಧಗಳ ವ್ಯವಸ್ಥೆಯೊಳಗೇ ಬಹುಪಾಲು ಸ್ಥಾಪಿತವಾಗಿದೆ.  ಕಡ್ಡಾಯವಾದ ಭಿನ್ನ ಲಿಂಗೇಯ (hetero-sexual) ವಿವಾಹದ ಮೂಲಕ ಬಿಗಿಯಾದ ಹಿಡಿತ ಸಾಧಿಸಿದೆ.  ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಿಸುವುದು ಒಂದು ಜಾತಿಯ ಕುಟುಂಬ ಮತ್ತು ಬಂಧುತ್ವದ ಉಪರಚನೆಯನ್ನು ನಿಯತವಾಗಿ ಉಳಿಸುವ ತಂತ್ರವಾಗಿದೆ.  ಈ ಗುರಿ ಸಾಧಿಸಲು ಸಾಮಾಜೀಕರಣ ಪ್ರಕ್ರಿಯೆಯು ನಿರಂತರವಾಗಿ ಹುಡುಗಿಯನ್ನು ಶಿಸ್ತಿಗೆ ಒಳಪಡಿಸಲು ಹವಣಿಸುತ್ತಿರುತ್ತದೆ.  ಈ ಕಾರಣಕ್ಕಾಗಿ ಅವಳ ಆತ್ಮವಿಶ್ವಾಸ ಕುಗ್ಗುವಂತೆ, ತನ್ನದೇ

---

೧೭ ಅನುದಿನದ ಅಂತರಗಂಗೆ: ಪು.ಸಂ:೮೩

೧೮ ಅದೇ: ಪು.ಸಂ: ೧೦೫

ಶರೀರವನ್ನು ಅವಳು ಅರಿಯದಂತೆ ಮತ್ತು ಕುಟುಂಬದಾಚೆಗೆ ತನ್ನ ಸ್ವತಂತ್ರ ಅಸ್ತಿತ್ವದ ಕುರಿತು ಚಿಂತಿಸದಂತೆ ಮಾಡಲಾಗುತ್ತದೆ."[೧೯]

'ಕೆಲವು ಪುರುಷರು ತಾವು ಪ್ರೀತಿಸುವ ಸ್ತ್ರೀಯರನ್ನೇ ಶೋಷಿಸುತ್ತಿರುತ್ತಾರೆ' ಎಂಬುದಕ್ಕೆ ನಂದಕುಮಾರ್ ಅತ್ಯುತ್ತಮ ಉದಾಹರಣೆಯಾಗಿ ಕೆಲವು ಸಂದರ್ಭಗಳಲ್ಲಿ ಹೀಗೆ ಕಾಣಿಸಿಕೊಳ್ಳುತ್ತಾರೆ.

"ಏನೋ ಕೋಪಕ್ಕೆ ಹೀಗೆ ಆಡ್ತೀನಿ ನಿನ್ನ ಮೇಲೆ ಪ್ರೀತಿ ಇಲ್ಲವಾ ನನಗೆ, ನೀನು, ಮಕ್ಕಳು ಇಲ್ಲದೇ ಒಂಟಿ ಜೀವನ ನಡೆಸುವುದು ನನಗೆ ಬಹಳ ಕಷ್ಟವಾಗಿದೆ ಮತ್ತೆ ಎಲ್ಲರೂ ಒಟ್ಟಾಗಿ ಇರೋಣ, ಹಳೆಯದನ್ನೆಲ್ಲ ಮರೆತುಬಿಡೋಣ"[೨೦] ಎಂದು ಹೇಳಿರುವ ಈ ಸಾಲುಗಳನ್ನು ಓದುವಾಗ ನಮ್ಮ ಭಾರತೀಯ ಪರಂಪರೆ, ಭಾರತೀಯ ಸಂಸ್ಕೃತಿ ಎಂಬ ಹೆಸರಿನಲ್ಲಿ ಹೆಣ್ತನದ ಮೇಲೆ ನಿಯಂತ್ರಣವನ್ನು ಹೇರುತ್ತಿರುವ ರೀತಿ ತಿಳಿಯುತ್ತದೆ. **'ಹೆಣ್ಣು ಸದಾ ಗಂಡಿಗೆ ಅಧೀನವಾಗಿರಬೇಕೆಂಬ ಹೇಳಿಕೆಯಿಂದ ಗಂಡಿಗೆ ಮಾತ್ರ ಹೆಚ್ಚು ಲಾಭ, ಈ ಎಲ್ಲ ನೀತಿ-ನಿಯಮಗಳು ಗಂಡಿನ ಅನುಕೂಲಕ್ಕಾಗಿ ಮಾಡಲ್ಪಟ್ಟಿದೆ ಸಾಮಾಜಿಕ ನೀತಿ-ನಿಯಮಗಳೇ ಹೊರತು ಹೆಣ್ಣಿನ ಅನುಕೂಲಕ್ಕಾಗಿ ಮಾಡಲ್ಪಟ್ಟಿದ್ದಲ್ಲ'.** ಈ ಬಗೆಯ ನಿಯಮಗಳಿಗೆ ಒಳಪಡಿಸುವ ಮೂಲಕ ಆಕೆಯನ್ನು ಯಾವುದೋ ಒಬ್ಬ ವ್ಯಕ್ತಿಯ ಒಂದು ಖಾಸಗಿ ಆಸ್ತಿಯಾಗಿ ಮಾಡಲಾಗುತ್ತದೆ. ಎಂಬುದನ್ನು ಒಂದು ಕುಟುಂಬ ವ್ಯವಸ್ಥೆಯೊಳಗೆ ನೋಡಬಹುದಾಗಿದೆ.

ಸ್ತ್ರೀ ಹಾಗೂ ಪುರುಷ ಇಬ್ಬರೂ ಸೇರಿ ನಡೆಸುವ ಈ ಸಂಸಾರ ಎರಡು ಖತ್ತಿಯ ಅಲುಗಿನ ಹಾಗೆ; ಅಲ್ಲಿ ಪ್ರೀತಿಯೂ ಇದೆ, ದ್ವೇಷವೂ ಇದೆ, ತ್ಯಾಗವೂ ಇದೆ, ಅಸಹಾಯಕತೆಯೂ, ಇದೆ, ಕೊನೆಗೆ ಕ್ಷಮೆಯೂ ಇದೆ. ಎಂಬುದಕ್ಕೆ ಈ ಸನ್ನಿವೇಶವನ್ನು ನೋಡಬಹುದು. ಹಿರಿಯ ಸಾಹಿತಿಯೊಬ್ಬರು ಪ್ರತಿಭಾರವರ ಕತ್ತಿನ ಮೇಲೆ ಇದ್ದ ಹೊಡೆತದ ನೀಲಿ ಗುರುತುಗಳನ್ನು ನೋಡಿ "ಇಂಥದ್ದನ್ನೆಲ್ಲ ಸಹಿಸಿಕೊಂಡು ಯಾಕಿದ್ದೀಯಾ ಅಂತ ಕೇಳಿದರು, ಯಾಕೆಂದರೆ ನಾನು ಅವನನ್ನು ಪ್ರೀತಿಸುತ್ತೀನಿ, ಅದಕ್ಕೇ ಅಂದೆ. ಪ್ರೀತಿಯಲ್ಲಿ ಹಿಂಸೆ ಇರುವುದಿಲ್ಲ. On the contrary ಪ್ರೀತಿಯಲ್ಲೇ ಹಿಂಸೆ ಇರೋದು. ಅವನಿಗೆ ನನ್ನ ಬಗ್ಗೆ ಯಾಕೆ ಅಂತಹ possessiveness ಅಂದರೆ ನಾನು ಎಲ್ಲಿ ಅವನಿಂದ ದೂರ ಆಗ್ತೀನೇನೋ

೧೯ ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ: ಪುಟ:೩೩

೨೦ ಅನುದಿನದ ಅಂತರಗಂಗೆ: ಪು.ಸಂ:೨೫-೨೫೧

ಅನ್ನುವ ಆತಂಕ ಅದಕ್ಕೆ ನನ್ನ ಬಗ್ಗೆ ಒಂದು ರೀತಿಯ insecurity ಇದೆ ಅವನಲ್ಲಿ, ಸ್ವಲ್ಪ ದಿನ ಕಳೆದರೆ ಎಲ್ಲ ಸರಿ ಹೋಗುತ್ತೆ, ನನಗೆ ಐವತ್ತು ವರ್ಷ ಆದ ಮೇಲೆ ಇದೆಲ್ಲ ಇರಲ್ಲ, ಅಂದೆ. ಅವರು ಒಂದು ಕ್ಷಣ ನನ್ನನ್ನೇ ದಿಟ್ಟಿಸಿ ನೋಡಿ 'ವಿಚಿತ್ರ ಹೆಂಗಸು ನೀನು' ಅಂದರು, ನಕ್ಕು 'ಹೌದು' ಅಂದೆ".[೨೧]

ಸನ್ನಿವೇಶ(೨) ಪ್ರತಿಭಾರವರಿಗೆ ಬಂದಿದ್ದ ಗೆಳೆಯನ ಪತ್ರವನ್ನು ನಂದಕುಮಾರ್ ಒಡೆದು ನೋಡಿದಾಗ ಆಕೆಯ ಕೆನ್ನೆಯ ಮೇಲೆ ಕೆಂಪು ಬರೆಗಳು ಮೂಡುವಂತೆ ಹೊಡೆಯುತ್ತಾರೆ. ತನ್ನ ಮಕ್ಕಳ ಮುಂದೆ ಏಟು ತಿಂದ ಪ್ರತಿಭಾ ಏನು ಮಾಡುವುದೆಂದು ತಿಳಿಯದೇ ತನ್ನ ಕುಟುಂಬದೊಳಗೇ ಇರುವ ಅನುಮಾನ, ಅಸಮಧಾನತೆ, ದೌರ್ಜನ್ಯ, ಯಜಮಾನಿಕೆ, ಅಧಿಕಾರಗಳ ಮಧ್ಯೆ ತನ್ನೊಳಗೇ ಅಡಗಿರುವ ಪ್ರೀತಿಯನ್ನು ಈ ಕೆಳಗಿನ ಸಾಲುಗಳಲ್ಲಿ ಹೀಗೆ ಅಭಿವ್ಯಕ್ತಿಸುತ್ತಾರೆ:-

"ಎಲ್ಲ ಕೌಟುಂಬಿಕ ಕ್ರೌರ್ಯ ಪ್ರಾರಂಭವಾಗುವುದು ಒಂದು ಸಣ್ಣ ತಳ್ಳುವಿಕೆ, ಸಣ್ಣ ತಿವಿತ, ಸಣ್ಣದೊಂದು ಏಟಿನಿಂದ. ಅದು ಪ್ರಾರಂಭವಾದಾಗ ಕೌಟುಂಬಿಕ ಕ್ರೌರ್ಯಕ್ಕೆ ಬಲಿಯಾಗುತ್ತಿರುವುದು ಹೆಣ್ಣಿಗೆ ಗೊತ್ತೇ ಆಗದಿರುವಷ್ಟು ಸಹಜವಾಗಿ ನಡೆಯತ್ತದೆ. ಗಂಡ ಎನ್ನುವ ಅಧಿಕಾರದ ಗಂಡು ಕೈ ಎತ್ತುತ್ತಾನೆ. ತೀವ್ರ ಆಘಾತಕ್ಕೆ ಒಳಗಾದರೂ ಹೆಂಡತಿ ಎನ್ನುವ ಕಾರಣಕ್ಕೆ ಹೆಣ್ಣು ಅದನ್ನು ನುಂಗಿಕೊಂಡು ಕ್ಷಮಿಸಿ ಬಿಡುತ್ತಾಳಡ."[೨೨]

ಈ ಸಾಲುಗಳನ್ನು ಓದಿದಾಗ ತನ್ನ ಗಂಡನ ಬಗ್ಗೆ ಪ್ರತಿಭಾರವರಿಗೆ ಎಂದೂ ತಿರಸ್ಕಾರವಿರಲಿಲ್ಲ ಬದಲಿಗೆ ಬೇಸರ, ದುಃಖ ಇತ್ತು ಎಂದು ಅನಿಸುತ್ತದೆ. ಏನಾದರೂ ಆಗಲಿ ನನ್ನನ್ನು ನಾನು ಕಳೆದುಕೊಳ್ಳಬಾರದೆಂದು ಮನಸ್ಸು ಮಾಡಿದ್ದ ಪ್ರತಿಭಾ ತನಗಾದ ದೈಹಿಕ ಹಿಂಸೆಯನ್ನು ಮರೆತು ತನ್ನ ಮನಸ್ಸಿನೊಳಗೇ ಹುಡುಕುತ್ತಿದ್ದ ತನ್ನ ಆತ್ಮ ಸುಖವನ್ನು ಆಕೆ ಪರ ಪುರುಷರಲ್ಲಿ ಹುಡುಕುವ ಪ್ರಯತ್ನ ಮಾಡುತ್ತಾ ಪರಪುರುಷರೊಂದಿಗೆ ಲೈಂಗಿಕ ಸಂಪರ್ಕವನ್ನು ಬಯಸಿದರೂ ಸಹ ತನ್ನ ಗಂಡನನ್ನು ಯಾವುದೇ ಕಾರಣಕ್ಕೂ ಆಕೆ ದ್ವೇಷಿಸಲಿಲ್ಲ ಎಂಬುದಕ್ಕೆ ಈ ಮೇಲಿನ ಸಾಲುಗಳು ಸಾಕ್ಷಿಯಾಗಿದೆ.

---

೨೧. ಅನುದಿನದ ಅಂತರಗಂಗೆ: ಪು.ಸಂ:೮೩

೨೨. ಅದೇ: ಪು.ಸಂ: ೧೨೪

ಲೋಕದ ಮೇಲೆ ಒಬ್ಬ ಗಂಡಸು ಸಾಧಿಸಿದ ಹಿಡಿತವನ್ನು ಒಂದು ಹೆಣ್ಣು ಸಾಧಿಸುವುದು ಕಷ್ಟವಾಗುತ್ತದೆ. ಕಾರಣ ಆಕೆ ಸದಾ ತನ್ನ ಜೀವಿ ವರ್ಗಕ್ಕೇ ಆತನಿಗಿಂತ ಹೆಚ್ಚು ಅಧೀನಳಾಗಿರುತ್ತಾಳೆ. ಆದರೆ ತನ್ನ ವ್ಯಕ್ತಿತ್ವದ ಅಸ್ಮಿತೆಗೆ ಧಕ್ಕೆ ಒದಗುವ ಸಂದರ್ಭ ಎದುರಾದರೆ ಆಕೆ ತನ್ನ ಜೀವಿ ವರ್ಗದಿಂದಲೇ ಬಿಡುಗಡೆಯನ್ನು ಪಡೆಯುವ ಪ್ರಯತ್ನ ಮಾಡುತ್ತಾಳೆ. 'ಮಹಿಳೆಯರ ಶೋಷಣೆಗೆ ಕುಟುಂಬವೇ ಪ್ರಧಾನಕೇಂದ್ರವಾಗಿದೆ' ಎಂದು ಆ ಸಂದರ್ಭದಲ್ಲಿ ಪ್ರತಿಭಾರವರಿಗೆ ಅನಿಸಿದ್ದರಿಂದ ಆಕೆ ತನ್ನ ಗಂಡನ ಮನೆಯಿಂದ ಹೊರಬಂದು ಈ ಆಧುನಿಕ ಜಗತ್ತಿನಲ್ಲಿ ಹೆಣ್ಣೊಬ್ಬಳು ಸ್ವತಂತ್ರವಾಗಿ, ಮುಕ್ತವಾಗಿ, ಸ್ವಾವಲಂಬಿಯಾಗಿ, ಒಂಟಿಯಾಗಿ ಬದುಕಲು ಸಾಧ್ಯ ಎನ್ನುವುದನ್ನು ಬಾಡಿಗೆ ಮಾಡಿದ ಸಂದರ್ಭದಲ್ಲಿ ಸಾಬೀತು ಪಡಿಸಿದ್ದಾರೆ.

ತಾನು ಬರೆಯುವ ತನ್ನ ಆತ್ಮಕಥನವನ್ನು ಗಂಡ, ಮಗ, ಮಗಳು, ಸಂಬಂಧಿಕರು, ಸಮಾಜದ ಎಲ್ಲ ಜನರು ಓದುತ್ತಾರೆ, ಎಂಬ ಅರಿವು ಇದ್ದರೂ ಆಕೆ ತನ್ನ ಜೀವನದಲ್ಲಿ ಎದುರಾದ ಪ್ರೇಮ ಪ್ರಸಂಗಗಳು, ಸಂಬಂಧಗಳು ಹಾಗೂ ಆಕೆಗೆ ಯಾರೋ ತೋರಿದ ಅಲ್ಪ ಪ್ರೀತಿಯ ಒಡೆಯರನ್ನು ತಾನೇ ಹುಡುಕಿಕೊಂಡು ಹೋಗುವುದು. ಹೆಣ್ಣಿನ ವ್ಯಕ್ತಿತ್ವವನ್ನು ಪೂರ್ಣವಾಗಿ ಗಂಡು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವೆಂದು ಹೇಳುತ್ತದೆ. ತನ್ನ ತಂದೆಯೊಂದಿಗೆ ಮಾತ್ರ ಇರಬೇಕಾದ ತನ್ನ ತಾಯಿ ಸಂಬಂಧ ಬೇರೆಯವರೊಂದಿಗೂ ಇರುವುದನ್ನು ಈ ಪರಿಸರದೊಳಗೇ ಬದುಕುವ ಪ್ರತಿಭಾರವರ ಮಗ ಮುಕ್ತವಾಗಿ ಒಪ್ಪಿಕೊಂಡಿದ್ದಾನೆ. ಪರಶುರಾಮನಂತೆ ತನ್ನ ತಾಯಿಯ ತಲೆಕಡಿಯಲು ಆತ ಎಂದೂ ಮುಂದಾಗಲಿಲ್ಲ ಪ್ರತಿಭಾ ತನ್ನ ಲೈಂಗಿಕ ಅತೃಪ್ತಿಯಿಂದ ಪರ ಪುರುಷರೊಂದಿಗೆ ಸಂಬಂಧ ಇಟ್ಟುಕೊಂಡಿದ್ದಳು ಎಂದು ತಿಳಿಯುವುದಕ್ಕಿಂತ ತನ್ನ ಮಾನಸಿಕ ತೃಪ್ತಿಗಾಗಿ ತನಗೆ ತೋರಿದ ಅಲ್ಪ ಪ್ರೀತಿಯ ಋಣಕ್ಕಾಗಿ ಅವರೊಂದಿಗೆ ಆಕೆ ಒಂದಾಗುತ್ತಿದ್ದಳಷ್ಟೇ ಎಂಬುದಕ್ಕೆ ಇಲ್ಲಿನ ಸಾಲುಗಳು ಸಾಕ್ಷಿಯಾಗಿದೆ.

"ಪ್ರೀತಿಗಾಗಿ ಸದಾ ಹಂಬಲಿಸುವ ನನಗೆ ಹಸಿದ ನಾಯಿಯನ್ನು ಕರೆದು ಯಾರಾದರೂ ಒಂದು ಚೂರು ಬ್ರೆಡ್ಡು ಕೊಟ್ಟರೂ ಧನ್ಯತೆಯಿಂದ ತಿನ್ನುವಂತೆ ಆಗಿತ್ತು"[೨೩]

ಗಂಡು ಬೇರೆ ಹೆಣ್ಣುಗಳ ಸಹವಾಸ ಮಾಡುವುದನ್ನು ನಮ್ಮ ಸಮಾಜ ತಂಬಾ ಸಹಜವಾಗಿ ಸ್ವೀಕರಿಸುತ್ತದೆ. ಆದರೆ ಹೆಣ್ಣು ಬೇರೆ ಗಂಡುಗಳ ಸಹವಾಸ ಮಾಡುವುದನ್ನು

---

೨೩. ಅನುದಿನದ ಅಂತರಗಂಗೆ: ಪು.ಸಂ:೮೧

ಯಾಕೆ ಸ್ವೀಕರಿಸುವುದಿಲ್ಲ? ಆಕೆಯಲ್ಲೂ ಪ್ರೀತಿಯ ಹುಡುಕಾಟವಿದೆ. ಆಕೆಗೂ ಗಂಡಿನಂತೆ ಬೇರೆ ವ್ಯಕ್ತಿಯ ಸಹವಾಸ ಮಾಡುವ ತುಡಿತ ಇರುತ್ತದೆ ಎಂಬುದಕ್ಕೆ ಪ್ರತಿಭಾರವರ ಪ್ರೀತಿ ಹುಡುಕಾಟದಲ್ಲಿ ನಾವು ನೋಡಬಹುದಾಗಿದೆ.

ಆಧುನಿಕ ಪರಿಸರದೊಳಗೆ ಇಂದು ಹೆಚ್ಚು ಚರ್ಚೆಯಾಗುವ ವಿಷಯವೆಂದರೆ 'ಲೈಂಗಿಕತೆ' ಇದೊಂದು ಜೀವಂತ ಸ್ಫೂರ್ತಿ ಕ್ರಿಯೆ. ಬಲ ಪ್ರಯೋಗದಿಂದಾಗಲೀ, ಹಕ್ಕು ಸಾಧನೆಯಿಂದಾಗಲೀ ಅದನ್ನು ಹಿಡಿತಕ್ಕೆ ತೆಗೆದುಕೊಳ್ಳಲು ಬರುವುದಿಲ್ಲ.

ಫ್ರಾಯ್ಡ್‌ನ ಪ್ರಕಾರ "ವ್ಯಕ್ತಿಗೆ ಒಂದು ದೇಹವಿದೆ, ಆ ದೇಹವು ಇತರ ದೇಹಗಳೊಡನೆ ಪಡೆದುಕೊಳ್ಳುವ ಸಂಬಂಧದ ಮುಖಾಂತರವೇ ತನ್ನ ಅಸ್ತಿತ್ವದ ಸ್ವರೂಪಗಳನ್ನು ಗ್ರಹಿಸುವುದು ಸಾಧ್ಯ"[೨೪]. ಹಾಗೇ ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಲು ಬೇರೆ-ಬೇರೆ ದೇಹ ಸಂಬಂಧಗಳ ಸಂಪರ್ಕ ಹೊಂದುತ್ತಿರುವುದೂ ಈ ಪರಿಸರದೊಳಗಿನ ಒಂದಂಶವಾಗಿದೆ.

ಎಲ್ಲೋ ಒಂದು ಕಡೆ ಪ್ರತಿಭಾರವರ ಗಂಡ ಆಕೆಯ ಮೇಲೆ ತನ್ನ ಅಧಿಕಾರ ಸ್ಥಾಪಿಸಲು ಸದಾ ಯತ್ನಿಸುತಿದ್ದರೂ ಆಕೆ ಮಾತ್ರ ಎಂದೂ ಆತನ ಹಿಡಿತಕ್ಕೆ ಸಿಗಲೇ ಇಲ್ಲ. ತನಗೆ ಇಷ್ಟ ಬಂದಂತೆ ತನ್ನ ಸ್ನೇಹಿತರೊಡನೆ ಪತ್ರಗಳ ಮೂಲಕ ಸದಾ ಒಡನಾಟದಲ್ಲಿರುತ್ತಿದ್ದರು. ನಮ್ಮ ಪಿತೃಪ್ರಧಾನತೆಯ 'ಹೆಣ್ಣು' ಎಂದರೆ ಹೀಗೆ ಇರಬೇಕೆಂದು ಹಿಂದಿನಿಂದ ಹೇಳಿಕೊಂಡು ಬರುತ್ತಿರುವುದು 'ಹೆಣ್ಣಿಗೆ ಕಲ್ಪಿಸಿದ ಅಥವಾ ಕಲಿಸಿದ ಜೀವನ ವಿಧಾನವಲ್ಲ ಅದೊಂದು ಸೇವಾ ವೃತ್ತಿ ಮಾತ್ರ' ಎಂಬುದು ನನ್ನ ಅಭಿಪ್ರಾಯ.

ಹೀಗೆ ಪುರುಷ ಮಾದರಿಗಳ ಅನುಕರಣೆಯ ಅಗತ್ಯ ಹಾಗೂ ಅನಿವಾರ್ಯತೆಯಿಂದ ಪಾರಾಗುವ ಪ್ರಯತ್ನವನ್ನು ಪ್ರತಿಭಾ ಮಾಡುವ ಸಂದರ್ಭದಲ್ಲಿ ಮನೆ ಬಿಟ್ಟು ಹೊರಬರುತ್ತಾಳೆ. **'ಪಿತೃಪ್ರಧಾನ ಸಂಬಂಧಗಳು ಮಹಿಳಾ ಚಳುವಳಿಗೆ ದಾರಿ ಮಾಡಿಕೊಡುತ್ತವೆ'**[೨೫] ಎಂಬುದಕ್ಕೆ ಈ ಸನ್ನಿವೇಶ ಸಾಕ್ಷಿಯಾಗಿದೆ. ಸ್ವಾವಲಂಬಿಯಾಗಿ ಬದುಕಲು ಮನೆಬಿಟ್ಟು ಹೊರ ಬಂದ ಮಹಿಳೆಗೆ ಬಿಡುಗೆಯ ಸ್ವಾತಂತ್ರ ಸಿಕ್ಕರೂ, ಈ ಸಮಾಜ ಆಕೆಯನ್ನು ತಪ್ಪಾಗಿ ಗ್ರಹಿಸುವ ಹಾಗೂ ನಿಗ್ರಹಿಸುವ ಕೆಲಸ ಮಾಡುತ್ತಿರುತ್ತದೆ. ಅದಕ್ಕಾಗಿಯೇ ಪ್ರತಿಭಾರವರ ಪತಿ ಮತ್ತೆ ಮನೆಗೆ ಮರಳಿ ಬಂದು ಬಿಡು ಎಂದ ತಕ್ಷಣ ಆಕೆ ಆತನೊಂದಿಗೆ ಮರಜೀವನ ನಡೆಸಲು ಮುಂದಾದರು.

---

೨೪. ದ ಸೆಕೆಂಡ್ ಸೆಕ್ಸ್: ಸಿಮೋನ್ ದ ಬುವಾ, ಪು.೬೯

೨೫. ಸ್ತ್ರೀವಾದಿ ಪ್ರವೇಶಿಕೆ, ಪು.೪೫

ಸಮಾಜದ ಮೂಲ ಘಟಕವಾದ 'ಕುಟುಂಬ' ಎಂಬ ವ್ಯವಸ್ಥೆ ಎಲ್ಲಾ ಸಮಸ್ಯೆಗಳ ನಡುವೆ ಇರುವ ಸುರಕ್ಷಿತವಾದ ವಲಯವೇ? ಅಥವಾ ಮಹಿಳೆಯರ ಶೋಷಣೆಗೆ ಪ್ರಧಾನವಾದ ಕೇಂದ್ರವೇ? ಎಂಬ ಪ್ರಶ್ನೆ ಪ್ರತಿಭಾ ತನ್ನ ಗಂಡನ ಕುಟುಂಬವನ್ನು ಮತ್ತೆ ಸೇರುವ ಸಂದರ್ಭದಲ್ಲಿ ಉದ್ಭವಿಸುತ್ತದೆ. ವ್ಯಕ್ತಿಗಳು ಯಾವ ಸಂದರ್ಭದಲ್ಲಿ ಹೇಗೆ ಬದಲಾಗುತ್ತಾರೆಂಬುದು ಹೇಳಲು ಸಾಧ್ಯವಿಲ್ಲ. ಪ್ರೀತಿಸಿ ಮದುವೆಯಾದ ನಂದಕುಮಾರ್ ಪ್ರತಿಭಾರವರೊಂದಿಗೆ ಸದಾ ಜಗಳವಾಡುವಾಗ 'ಪ್ರೀತಿಸಿ ಮದುವೆಯಾದರೂ ಅಥವಾ ಹಿರಿಯರು ಒಪ್ಪಿ ಮದುವೆ ಮಾಡಿದಾಗಲೂ ಈ ಕುಟುಂಬ ಹಿಂಸೆಯಿಂದ ಪಾರಾಗಲು ಸಾಧ್ಯವಿಲ್ಲವೇ ಎಂದೆನಿಸುತ್ತದೆ. ಇದನ್ನೆಲ್ಲಾ ಓದಿದ ನಂತರ ನಮ್ಮಲ್ಲಿ ಮೂಡುವ ಪ್ರಶ್ನೆ ಎಂದರೆ:– 'ಗಂಡ ಮತ್ತು ಹೆಂಡತಿಯ ಸಂಬಂಧದಲ್ಲಿ ಇರುವಂಥಹ ಅಧಿಕಾರ ಎಷ್ಟು ಕ್ರೌರ್ಯತೆಯಿಂದ ಕೂಡಿರುತ್ತದೆ? ಹಾಗೂ ಅದು ಎಷ್ಟು ಜೀವವಿರೋದಿಯಾಗಿರುತ್ತದೆ?'

ಸಾಮಾನ್ಯವಾಗಿ ಹೆಂಗಸರು ತಮ್ಮ ಉಡುಗೆ–ತೊಡುಗೆಗಳ ಬಗ್ಗೆ ಗಮನ ಹರಿಸುವುದು ಹೆಚ್ಚು. ಸುಂದರವಾದ ತಮ್ಮ ಮುಖವನ್ನು ಅಲಂಕರಿಸಿಕೊಳ್ಳುವುದು, ಪುರುಷರನ್ನು ತಮ್ಮ ಹದ್ದು ಬಸ್ತಿನಲ್ಲಿಟ್ಟುಕೊಳ್ಳಲು ಅವರ ಸೌಂದರ್ಯವೇ ಒಂದು ಅಸ್ತ್ರ ಎಂಬ ಭಾವನೆಯನ್ನು ಹೊಂದಿರುವ ಈ ಆಧುನಿಕ ಪರಿಸರದಲ್ಲಿ 'ತಾನಷ್ಟು ಸೌಂದರ್ಯವತಿ ಅಲ್ಲ; ತಾನೊಬ್ಬಳು ಹಲ್ಲುಬ್ಬಿ' ಎಂಬ ಮಾತುಗಳು ಆತ್ಮಕಥನದೊಳಗೆ ಅಲ್ಲಲ್ಲಿ ಬಂದು ಹೋಗುತ್ತದೆ. 'ವಕ್ರದಂತೆಯ ವಕ್ರೋಕ್ತಿ' ಎಂಬ ಭಾಗವನ್ನು ಓದಿದಾಗ ಪ್ರತಿಭಾರವರ ಸುಪ್ತ ಪ್ರಜ್ಞೆಯೊಳಗೆ ಜಾಗ್ರತವಾಗಿರುವ ಸೌಂದರ್ಯ ಪ್ರಜ್ಞೆಯನ್ನು ನೆನಪಿಗೆ ತರುತ್ತದೆ. ಆಕೆಯ ಸೌಂದರ್ಯದ ಬಗ್ಗೆ ಆಕೆಗಿರುವ ಕೀಳರಿಮೆ ಇದಾಗಿರಬಹುದು.

ಆಧುನಿಕತೆಯ ಮತ್ತೊಂದು ದೊಡ್ಡ ಬದಲಾವಣೆ ಎಂದರೆ ಭಾರತೀಯ ಪರಂಪರೆಯ ಹೆಣ್ಣು ಮಕ್ಕಳು ತಮ್ಮ ಗಂಡಂದಿರ ವರ್ತನೆಗಳಿಗೆ ಬೇಸತ್ತು ಅವರನ್ನು ಕೊಲ್ಲಲು ಎಂಥೆಂಥಾ ಉಪಾಯಗಳನ್ನು ಹುಡುಕುತ್ತಾರೆಂಬುದನ್ನು 'ಗಂಡನನ್ನು ಕೊಲ್ಲುವ ನೂರು ವಿಧಾನಗಳು' ಎಂಬ ಶೀರ್ಷಿಕೆಯಡಿ ಪ್ರತಿಭಾ ಪ್ರಸ್ತಾಪಿಸಿದ್ದಾರೆ. ಹೆಣ್ಣಿನ ಸಣ್ಣ–ಸಣ್ಣ ಸ್ವಾತಂತ್ರ್ಯವನ್ನು ಗಂಡು ಹರಣಮಾಡಿದಾಗ ಆಕೆಯ ಪರಂಪರಾಗತ ಮೌಲ್ಯ ಎಲ್ಲಿಗೆ ಬಂದು ನಿಲ್ಲುತ್ತದೆ ಎಂಬುದಕ್ಕೆ ಈ ಭಾಗ ಅತ್ಯುತ್ತಮ ಉದಾಹರಣೆಯಾಗಿದೆ. ಸಂಕುಚಿತ ಮನೋಭಾವದ ನಂದಕುಮಾರ್ ಕೇವಲ ಒಂದು ದ್ವಿಚಕ್ರವಾಹನಕ್ಕಾಗಿ ದೊಡ್ಡ ಜಗಳ ಆಡುವಂಥ ವ್ಯಕ್ತಿತ್ವ ಉಳ್ಳವರಾಗಿದ್ದಾರೆ. ಎಲ್ಲಿ ಆಕೆ ವಾಹನವನ್ನು ಓಡಿಸಲು ಆರಂಭಿಸಿದರೆ ಸ್ವತಂತ್ರಳಾಗಿ ಬಿಡುತ್ತಾಳೋ ಎಂಬ ಆತಂಕದಿಂದ

ವಾಹನ ಓಡಿಸುವುದನ್ನು ನಂದಕುಮಾರ್ ಖಡಾಖಂಡಿತವಾಗಿ ವಿರೋಧಿಸುತ್ತಿದ್ದರು. ಈ ಎಲ್ಲಾ ಪರ ವಿರೋಧಗಳ ಸಂಘರ್ಷದೊಳಗೆ ಜೀವಿಸುತ್ತಿದ್ದ ಪ್ರತಿಭಾರವರಿಗೆ ಆದ ದೊಡ್ಡ ಆಘಾತವೆಂದರೆ ಆಕೆಯ ದೇಹಕ್ಕೆ ಬೆಂಕಿ ಬಿದ್ದ ಸನ್ನಿವೇಶ.

ಈ ಆಘಾತದ ಬಗ್ಗೆ ಹೇಳದೇ ಪ್ರತಿಭಾರವರ ಆತ್ಮಕಥನ ಪೂರ್ಣವಾಗಲು ಸಾಧ್ಯವಿಲ್ಲ. ೨೭ ಪುಟಗಳಷ್ಟು ಆಕೆಯ ಸುಟ್ಟ ದೇಹದ ನೋವಿನ ನೆನಪುಗಳನ್ನು 'ಆ ಮರಕ್ಕೆ ಬೆಂಕಿ ಬಿದ್ದಾಗ' ಎಂಬ ಶೀರ್ಷಿಕೆಯಡಿ ಹಿಡಿದಿಟ್ಟಿದ್ದಾರೆ. ಅಲ್ಲಿನ ಕೆಲವು ಸಾಲುಗಳೂ ಹೀಗಿದೆ:-

"ಅವನ ಹತ್ತಿರ ಸೀಮೆಎಣ್ಣೆ ಡಬ್ಬ ಕಿತ್ತುಕೊಳ್ಳುವಾಗ ನನ್ನ ಬಟ್ಟೆಯ ಮೇಲೆಲ್ಲ ಸ್ವಲ್ಪ ಸೀಮೆಎಣ್ಣೆ ಚೆಲ್ಲಿತ್ತು. ಅದು ನನಗೆ ಗೊತ್ತಾಗಿರಲಿಲ್ಲ.

ಸೊಳ್ಳೆ ಬತ್ತಿ ಹಚ್ಚಲೆಂದು ಬತ್ತಿ ಎತ್ತಿಕೊಂಡೆ,

ಕಡ್ಡಿ ಗೀರಿದೆ,

ಅದು ಕೈಜಾರಿ ನನ್ನ ಬಟ್ಟೆಯ ಮೇಲೆ ಬಿತ್ತು.

ಅಷ್ಟೇ. ಒಂದೇ ಕ್ಷಣಕ್ಕೆ ಭಗೆಂದು ಹೊತ್ತಿಕೊಂಡು ಉರಿಯುತ್ತಿದ್ದೆ. ಜೋರಾಗಿ ಅವನ ಹೆಸರು ಕಿರುಚಿದೆ. ಕಣ್ಣುಬಿಟ್ಟ ಅವನು ಹೊತ್ತಿ ಉರಿಯುತ್ತಿದ್ದ ನನ್ನನ್ನು ನೋಡಿ ವಿಪರೀತ ಗಾಬರಿಯಾಗಿ ಓಡಿ ಬಂದು ಬಚ್ಚಲು, ಮನೆಗೆ ಕರೆದುಕೊಂಡು ಹೋಗಿ ನೀರು ಸುರಿದ, ಷವರ್ ಆನ್ ಮಾಡಿದ, ಬಟ್ಟೆ ಕಿತ್ತು ಬಿಸಾಡಿದ. ಎಲ್ಲದಕ್ಕೂ ಬಹುಶಃ ಎರಡು ಸೆಕೆಂಡು ಕೂಡ ಹಿಡಿಸಿರಲಿಲ್ಲ. ಅಷ್ಟರಲ್ಲಾಗಲೇ ನಾನು ಪೂರ್ತಿ ಸುಟ್ಟು ಹೋಗಿದ್ದೆ.

ಹೆದರಿಕೆಗೆ ಅವನು ಜೋರಾಗಿ ಅಳುತ್ತಿದ್ದ. ನನಗಿಂತ ಜೋರಾಗಿ! ನಾನು ಧೃತಿಗೆಡದೆ 'ಒಂದು ಬೆಡ್‌ಶೀಟ್ ತಗೊಂಡು ಬಾ' ಅಂದೆ, ತಂದ, ಅದನ್ನು ನನಗೆ ಹೊದಿಸಿ ಅದರ ಮೇಲೂ ಮೂರು ನಾಲ್ಕು ಬಕೆಟ್ ನೀರು ಸುರಿಯುವಂತೆ ಹೇಳಿದೆ.

'ಸ್ಕೂಟರ್ ತೆಗಿ, ಆಸ್ಪತ್ರೆಗೆ ಹೋಗೋಣ' ಅಂದೆ,

'ಆಟೋ ತರ್ತೀನಿ' ಅಂದ,

'ಬೇಡಾ, ಬೇಗ ಆಸ್ಪತ್ರೆಗೆ ಹೋಗಬೇಕು, ಆಟೋ ಇಷ್ಟು ಹೊತ್ತಿಗೆ ಸಿಗಲ್ಲ' ಅಂದೆ. ಹಾಗೆ ಒದ್ದೆ ಬೆಡ್‌ಶೀಟ್‌ನಲ್ಲಿ ಹೊರಗೆ ಬಂದು ಸ್ಕೂಟರ್ ಮೇಲೆ ಕೂತೆ ಅವನು ನಡುಗುತ್ತಾ ಓಡಿಸಿದ. ಐದು ನಿಮಿಷದಲ್ಲಿ ಸೌತ್‌ಎಂಡ್ ಬೆಂಗಳೂರು ಆಸ್ಪತ್ರೆ ತಲುಪಿದೆವು. ನಾನು ಇಳಿದು ಎದುರಿಗೇ ಇದ್ದ ಎಮರ್ಜೆನ್ಸಿ ವಾರ್ಡ ಪ್ರವೇಶಿಸಿ ಅಲ್ಲಿದ್ದ ಡ್ಯೂಟಿ ಡಾಕ್ಟರ್‌ಗೆ 'ಡಾಕ್ಟರ್ 'I got burnt' ಅಂದೆ.

ತಕ್ಷಣ ನನ್ನನ್ನು ಬೆಡ್ ಮೇಲೆ ಮಲಗಿಸಿ ಬೆಡ್‌ಶೀಟ್ ತೆಗೆದ ಆ ಡಾಕ್ಟರ್ ಚೀತ್ಕಾರ ಮಾಡಿದರು. ೪೦% ೩ರಷ್ಟು ಸುಟ್ಟುಹೋಗಿತ್ತು"[೨೬]

ಪ್ರತಿಭಾಳ ಗೆಳತಿಕೊಟ್ಟ ಒಂದು Second hand scooterಗಾಗಿ ಜಗಳ ಮಾಡಿದ ನಂದಕುಮಾರ್‌ಗೆ ತನ್ನ ಹೆಂಡತಿ ತನಗಿಂತ ಹೆಚ್ಚು ಓದಿದ್ದಾಳೆ, ಬುದ್ದಿವಂತೆ, ಮನೆಯಿಂದ ಹೊರಗೆ ಹೋಗಿ ಕೆಲಸ ಮಾಡಿ ಆರ್ಥಿಕವಾಗಿ ಸ್ವಾವಲಂಬಿಯಾಗಿ ಬಿಟ್ಟರೆ ಆಕೆಯ ಮೇಲೆ ತನ್ನ ಅಧಿಕಾರದ ಪ್ರಭುತ್ವವನ್ನು ಸ್ಥಾಪಿಸಲು ಆಗುವುದಿಲ್ಲ ಎಂಬ ಆತಂಕದಿಂದಲೇ ಆತ ಹೀಗೆಲ್ಲ ವರ್ತಿಸುತ್ತಿದ್ದ

**"ಪಿತೃಪ್ರಧಾನ ವ್ಯವಸ್ಥೆಯ ಮಹಿಳೆಯರು ಯಾವಾಗಲೂ ಅಧಿಕಾರ ಮತ್ತು ಅಧಿಪತ್ಯಗಳಿಂದ ದೂರವಿರಿಸಲ್ಪಟ್ಟಿರುತ್ತಾರೆ. ಆದರೆ, ಯಾವಾಗೆಲ್ಲಾ ಅವರು ಅಧಿಕಾರ ಸ್ಥಾನಗಳಿಗೆ ಬರುವುದು ಪಿತೃ ಪ್ರಧಾನ ವ್ಯವಸ್ಥೆಗೆ ಅನುಕೂಲಕವಾಗಿರುತ್ತದೋ, ಆಗಷ್ಟೇ ಮಹಿಳೆಯರಿಗೆ ಸೀಮಿತ ಅವಕಾಶಗಳನ್ನು ಬಿಟ್ಟುಕೊಡಲಾಗುತ್ತದೆ,"**[೨೭] ಎನ್ನುವುದಕ್ಕೆ ಈ Second hand scooter ಸನ್ನಿವೇಶ ಸಾಕ್ಷಿಯಾಗಿದೆ.

ಆರು ತಿಂಗಳು ಆಸ್ಪತ್ರೆಯಲ್ಲೇ ಕಾಲ ಕಳೆದ ಪ್ರತಿಭಾ ಮನೆಗೆ ಮರಳಿ ಬಂದ ಮೇಲೆ ವೈಶ್ಯ ಬ್ಯಾಂಕಿನವರು 'ಸ್ತ್ರೀಚಕ್ರ' ಯೋಜನೆ ಅಂತ ಪ್ರಚಾರ ಮಾಡಿ, ದುಡಿಯುವ ಮಹಿಳೆಯರಿಗೆ ಸ್ಕೂಟರ್ ಖರೀದಿಗಾಗಿ ಸಾಲ ಕೊಡ್ತೀವಿ ಅಂತ ಹೇಳಿದಾಗ ಯಾರಿಗೂ ಹೇಳದೆ ತಕ್ಷಣ ಅದಕ್ಕೆ ಅಪ್ಲೈ ಮಾಡಿ, ಗಾಡಿ ಡೆಲವರಿ ದಿನ ಗಂಡನನ್ನು ಕರೆದುಕೊಂಡು ಹೋದರು. ಆಗಲು ಬುಸುಗುಡುತ್ತಿದ್ದ ನಂದಕುಮಾರ್‌ಗೆ ಕೇರ್ ಮಾಡದೇ ಬೆಳಂಬೆಳಗಿನ ಒಂದು ಕೈನೆಟಿಕ್ ಹೊಂಡಾ ಗಾಡಿ ತೆಗೆದುಕೊಂಡ ಆ ಸಂತಸದ ಕ್ಷಣಗಳ ಬಗ್ಗೆ ಪ್ರತಿಭಾ ಹೀಗೆ ಹೇಳಿಕೊಂಡಿದ್ದಾರೆ:–

---

೨೬. ಅನುದಿನದ ಅಂತರಗಂಗೆ: ಪು.ಸಂ:೮೧

೨೭ ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ: ಪುಟ:೩೦

"ಆ ಗಳಿಗೆಯನ್ನು ನಾನು ಎಂದಿಗೂ ಮರೆಯುವ ಹಾಗಿಲ್ಲ. ಇದೇ ಸ್ವರ್ಗ, ಇದೇ ಜಯ, ಇದೇ ಸಾಧನೆ ಅಂದುಕೊಂಡೆ, ನನ್ನ ಸ್ಕೂಟರ್ ಮೇಲೆ ನನಗಿರುವ ಪ್ರೀತಿಗಿಂತ ಮಿಗಿಲಾದದ್ದು ಬೇರೆ ಇಲ್ಲ. ಅವತ್ತಿನಿಂದ ಇವತ್ತಿನ ತನಕ ಆ ಸ್ಕೂಟರ್ ನನ್ನ ಅಂತರಂಗದ ಆಪ್ತವಾಗಿ, ನನ್ನ ಏಳು-ಬೀಳುಗಳಿಗೆ ಸಾಕ್ಷಿಯಾಗಿ ದಿನಾ-ದಿನಾ ಸ್ವಲ್ಪ ಕೂಡಾ ಕೊಸರದೇ ನನ್ನನ್ನು ಹೊತ್ತೊಯ್ಯುತ್ತಿದೆ.

ಅದರ ಮೇಲೆ ಎಂತೆಂತಹ ಮಹಾನುಭಾವರು, ಘಟಾನುಘಟಿಗಳನ್ನು ಕೂರಿಸಿಕೊಂಡು ಸವಾರಿ ಮಾಡಿದ್ದೇನೆ. ಎ.ಕೆ.ರಾಮಾನುಜನ್‌ನಿಂದ ಹಿಡಿದು ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಜಯಂತ ಕಾಯ್ಕಿಣಿ, ಅರವಿಂದ ಮೆಹರೋತ್ರ, ಕೆ.ವಿ.ತಿರುಮಲೇಶ್, ಎಂ.ಟಿ.ವಾಸುದೇವನ್ ನಾಯರ್. . . . ಹೀಗೆ ಕೊನೆಯಿಲ್ಲದ ಪಟ್ಟಿ. ಸ್ಕೂಟರ್ ಮೇಲೆ ಸವಾರಿ ಮಾಡಿಕೊಂಡು ಹೋಗುವಾಗ ಇಡೀ ಜಗತ್ತಿನ ಒಡೆತಿ ನಾನು. ಗಾಳಿ ಬೀಸುವುದು ನನಗಾಗೇ. ಸೂರ್ಯ ಮೂಡುವುದು ನನಗಾಗೇ. ರಸ್ತೆಯಿರುವುದು ನನಗಾಗೇ. ಹಾಡು ಹೇಳಿಕೊಂಡು ನನ್ನ ಹಾಡಿಗೆ ನನ್ನದೇ ಜಗತ್ತಿನಲ್ಲಿ ಸ್ಕೂಟರಿನ ಮೇಲೆ ನಾನು ಸಾಗುವಾಗ ಸುತ್ತಲ ಕ್ಷುದ್ರ ಬದುಕಿನ ಬಗ್ಗೆ ನನಗೇಕೆ ಗಮನ?"[೨೮] ಎಂಬ ಈ ಮೇಲಿನ ಸಾಲುಗಳನ್ನು 'ಕೀಲುಕುದುರೆ ರಾಜಕುಮಾರಿ' ಎಂಬ ಶೀರ್ಷಿಕೆಯಡಿ ಪ್ರಸ್ತಾಪಿಸಿದ್ದಾರೆ.

ಪುರುಷ ಪ್ರಧಾನತೆಯ ಸಮಾಜದಲ್ಲಿ ಸ್ತ್ರೀಯರ ದೇಹವನ್ನು ಯಾವ ರೀತಿ ನೋಡುತ್ತಾರೆ, ಅವರೊಂದಿಗೆ ಕೇವಲ ಲೈಂಗಿಕ ಸಂಪರ್ಕದ ಸುಖವನ್ನು ಪಡೆಯುವ ದೃಷ್ಟಿಕೋನದ ಸಲುವಾಗಿಯೇ ಅವಳ ದೇಹವನ್ನು ನೋಡುತ್ತಾರಾ? ಎಂಬುದಕ್ಕೆ ಪ್ರತಿಭಾರವರ ಆತ್ಮಕಥನದೊಳಗಿನ ಈ ಸನ್ನಿವೇಶ ಸಾಕ್ಷಿಯಾಗಿದೆ:-

ಯಾರೋ ಹಿರಿಯ ಸಾಹಿತಿಯೊಬ್ಬರನ್ನು ಸಮಾರಂಭ ಮುಗಿದ ನಂತರ ಅವರ ಕೊಠಡಿಯಲ್ಲಿ ಏಕಾಂತದಲ್ಲಿ ಭೇಟಿಯಾದ ಪ್ರತಿಭಾ ಅವರೊಂದಿಗೆ ಆ ಸಂದರ್ಭದಲ್ಲಿ ಮಾತನಾಡಿದ ಮಾತುಕತೆ ಇದಾಗಿದೆ. "ಅವರು ಚಿತ್ರವನ್ನು ಕುರಿತು ಮಾತನಾಡುತ್ತಲೇ ನನ್ನನ್ನು ಅಪ್ಪಿಕೊಂಡರು. ನಾನೂ ಅಪ್ಪಿಕೊಂಡೆ. ಎರಡು ನಿಮಿಷ ನಾವು ಪರಸ್ಪರ ಮುದ್ದಿಸಿಕೊಂಡೆವು. ಮರುಕ್ಷಣ ಅವರೊಂದು ಪ್ರಶ್ನೆ ಕೇಳಿದರು.

'Are you burnt there also?

---

೨೮ ಅನುದಿನದ ಅಂತರಗಂಗೆ: ಪು.ಸಂ:೧೭೭

'ಅಂದರೆ?' ನಾನು ಅರ್ಥವಾಗದೇ ಕೇಳಿದೆ.

ಅಂದರೆ. . . .ಅಂದರೆ. . . .ನಿನಗೆ ಅಲ್ಲೂ ಸುಟ್ಟಿದೆಯಾ?

ನನಗೆ ಯಾರೋ ಕಬ್ಬಿಣದ ಕೈಯಿಂದ ಕಪಾಳಕ್ಕೆ ತಟ್ಟಿದ ಹಾಗಾಯಿತು. ಮಂಜು ನೀರು ತಲೆಯ ಮೇಲೆ ಸುರಿದ ಹಾಗಾಯಿತು. ನನ್ನ ಸುಟ್ಟ ಕೈ ನೋಡಿ ನನ್ನ ಬಗ್ಗೆ ಜನ ಹೀಗೂ ಆಲೋಚಿಸಬಹುದು ಎನ್ನುವುದು ನನ್ನ ಕನಸಿನಲ್ಲಿಯೂ ಊಹಿಸಿರಲಿಲ್ಲ."[೨೯]

"ಅಧೀನತೆಯ ಭಾವನೆಯು ಹೆಣ್ಣಿನ ಆತ್ಮವಿಶ್ವಾಸ, ಆತ್ಮಗೌರವ ಮತ್ತು ಆತ್ಮನಿರೀಕ್ಷಣೆಯನ್ನು ಕುಗ್ಗಿಸಿ, ಆಕಾಂಕ್ಷೆಗಳಿಗೆ ಕಡಿವಾಣ ಹಾಕುತ್ತದೆ. ತನ್ನ ತನವನ್ನು ಉಳಿಸಿಕೊಳ್ಳಲು ಹೆಣ್ಣು ಮಾಡುವ ಪ್ರತಿಯೊಂದು ಕ್ರಿಯೆಯೂ 'ಹೆಣ್ಣಿಗೆ ತಕ್ಕುದಲ್ಲ' ಎನಿಸಿಕೊಳ್ಳುತ್ತದೆ. ತನ್ನ 'ಪಾತ್ರ' ಮತ್ತು 'ಸ್ಥಾನ'ವನ್ನು ಆಕೆ ಬಿಟ್ಟು ಕದಲಿದರೆ ಸಾಕು, 'ಗಂಡುಬೀರಿ' ಅಥವಾ 'ಮಾನಗೆಟ್ಟವಳು' ಎನಿಸಿಕೊಳ್ಳುತ್ತಾಳೆ. ಹೆಣ್ಣನ್ನು ಗಂಡಿಗಿಂತ ಕೀಳು ಎಂದು ವ್ಯಾಖ್ಯಾನಿಸುವ, ಅಧಿಕಾರ ಹೇರುವ ಪದ್ಧತಿ-ಆಚರಣೆಗಳು ಎಲ್ಲಾ ಕಡೆಯೂ ಉಂಟು"[೩೦] ಎಂಬುದಕ್ಕೆ ಈ ಆತ್ಮಕಥನದೊಳಗೆ ಬರುವ ಕೆಲವು ಸನ್ನಿವೇಶಗಳು ಸಾಕ್ಷಿಯಾಗಿದೆ.

ಆತ್ಮಕಥನದ ಅಂತ್ಯದಲ್ಲಿ 'ನಂದಕುಮಾರ್ ಪ್ರತಿಭಾರವರಿಗೆ ಮನೆಕಟ್ಟೀನಿ ಬಂದು ಬಿಡು ಎಂದು ಹೇಳಲು ಕಾರಣಗಳಿವೆ. ಒಂದು ಗಂಡಿಗೆ ಹೆಣ್ಣು ಮನೆಬಿಟ್ಟು ಹೋದಾಗ ಇಡೀ ಮನೆಯ ಎಲ್ಲ ಕೆಲಸವನ್ನು ತಾನೇ ನಿಭಾಯಿಸುವ ಹಾಗೂ ಸಂಗಾತಿ ಇಲ್ಲದೇ ಇರುವ ಎರಡು ಖಾಲಿತನಗಳ ಅರಿವಾಗುತ್ತದೆ. ಆದ್ದರಿಂದಲೇ ಆತ ವಾಪಸ್ಸು ಬಂದು ಬಿಡು ಎಂದು ಕರೆಯುವುದು. ಈ ಸಮಾಜ ಹೇಳಿರುವ 'ಹೆಣ್ಣಿನ ಅಧೀನತೆಯಿಂದ ಗಂಡಿಗೇ ಹೆಚ್ಚು ಅನುಕೂಲವಾಗುತ್ತದೆ. ಆಕೆ ಆ ನಿಯಮಗಳನ್ನು ಉಲ್ಲಂಘಿಸಿದ ತಕ್ಷಣ ಗಂಡಿಗೆ ಅದು ಅರಿವಾಗುತ್ತಾ ಹೋಗುತ್ತದೆ.

ಪುರುಷ ತನ್ನ ಸ್ವಾರ್ಥಕ್ಕೋಸ್ಕರ ಕಲ್ಪಿಸಿಕೊಂಡಿರುವ ಕೆಲವು ಕಟ್ಟುಪಾಡುಗಳಲ್ಲಿ ತನ್ನಿಷ್ಟಕ್ಕೆ ವಿರುದ್ಧವಾಗಿ ನರಳುತ್ತ ಜೀವನದುದ್ದಕ್ಕೂ ಬದುಕು ಸಾಗಿಸುವ ಹೆಣ್ಣಲ್ಲ ಪ್ರತಿಭಾ. ಆಧುನಿಕ ಪರಿಸರದಲ್ಲಿ ಕೆಲವು ಮಹಿಳಾ ಸಾಹಿತಿಗಳು ಚರ್ವಿತ-ಚರ್ವಣ ಎನಿಸುವ ಸಾಹಿತ್ಯವನ್ನು ನಿರ್ಮಾಣ ಮಡುತ್ತಿದ್ದ ಕಾಲಘಟ್ಟದಲ್ಲೇ ಇದ್ದ ಪ್ರತಿಭಾ ತಮ್ಮ ಅಂತರಂಗದ ತುಮುಲಗಳನ್ನು,

---

೨೯ ಅನುದಿನದ ಅಂತರಗಂಗೆ: ಪು.ಸಂ:೧೯೨-೧೯೩

೩೦. ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ: ಪುಟ:೩೧

ಆತ್ಮರತಿಯ ತೀರಾ ವೈಯಕ್ತಿಕ ವಿಚಾರಗಳನ್ನು ದಾಖಲಿಸುವ ಸಂದರ್ಭ, ಅರ್ಥಕಳೆದುಕೊಂಡಿರುವ ನಮ್ಮ ಪರಂಪರಾಗತ ಮೌಲ್ಯಗಳನ್ನು ಧಿಕ್ಕರಿಸುವ ಮನೋಭಾವವನ್ನು ಆಕೆ ಬೆಳೆಸಿಕೊಂಡಿದ್ದಾಳೆ.

ಆಧುನಿಕ ಪರಿಸರದೊಳಗೆ ಬೆಳೆದಂತಹ ಶಿಕ್ಷಿತ ಹೆಣ್ಣು ಮಗಳು ತನ್ನದೇ ಆದ ಅಸ್ಮಿತೆಯನ್ನು ಉಳಿಸಿಕೊಳ್ಳಲು ಮಾಡುವ ಎಲ್ಲ ಪ್ರಯತ್ನವನ್ನೂ ಪ್ರತಿಭಾ ಮಾಡಿದ್ದಾರೆಂಬುದು ಅವರ ಆತ್ಮಕಥನ ಓದಿದಾಗ ಮನನವಾಗುತ್ತದೆ. ಆದ್ದರಿಂದಲೇ 'ಅನುದಿನದ ಅಂತರಗಂಗೆ'ಯನ್ನು ನನ್ನ ಅಧ್ಯಯನದಲ್ಲಿ 'ಆಧುನಿಕ ಪರಿಸರದಲ್ಲಿ ಅಸ್ಮಿತೆಯ ಹುಡುಕಾಟ' ಎಂದು ಪರಿಗಣಿಸಿದ್ದೇನೆ. ಪ್ರತಿಭಾರವರ ಜೀವನದ ಈ ಎಲ್ಲ ಅನುಭವಗಳ ಪಯಣಕ್ಕೆ ಕಾರಣರಾದವರೇ ಆಕೆಯ ಪತಿ ನಂದಕುಮಾರ್ ಆ ಕಾರಣಕ್ಕಾಗಿಯೇ ಈ ಕೃತಿಯನ್ನು ಪ್ರತಿಭಾ ಅವರಿಗೇ ಅರ್ಪಣೆ ಮಾಡಿದ್ದಾರೆ.

ಅನುದಿನದ ಅಂದರೆ ಪ್ರತಿದಿನದ, ಪ್ರತಿಕ್ಷಣದ ಮನಸ್ಸಿನ ತೊಳಲಾಟವನ್ನು ನೋಡಬಹುದು. ಹೆಣ್ಣು ತನ್ನ ಅಸ್ತಿತ್ವದ ಶೋಧನೆಯಲ್ಲಿ ಯಾವ ರೀತಿ ಹೊಸ ಹುಡುಕಾಟಕ್ಕೆ ಕೈ ಹಾಕಿದರೂ ಆಕೆಯ ಮನಸ್ಸಿನ ತಹ-ತಹವನ್ನು ಸುತ್ತಲಿನ ಸಮಾಜ ಅಂದರೆ ಪಿತೃಪ್ರಾಧಾನ್ಯತೆಯ ಮೌಲ್ಯಗಳನ್ನು ಅಂತರಂಗೀಕರಿಸಿಕೊಂಡಿರುವ ಸಮಾಜವು ಸಹಿಸುವುದಿಲ್ಲವಾದ್ದರಿಂದ ಆಕೆಯ ಹುಡುಕಾಟ ನಿರಾಶೆಯಲ್ಲೇ ಕೊನೆಯಾಗುವುದನ್ನು ಈ ಕಥನ ಹೇಳುತ್ತದೆ.

‘ಆಧುನಿಕ ಪರಿಸರದಲ್ಲಿ ಅಸ್ಮಿತೆಯ ಹುಡುಕಾಟ’– ಈ ಅಧ್ಯಾಯದ ಗ್ರಹೀತಗಳು :

೧ ‘ಆಧುನಿಕ’ ಪರಿಸರದಲ್ಲಿ ಹೆಣ್ಣಿನ ವ್ಯಕ್ತಿ ಸ್ವಾತಂತ್ರ, ಹೆಣ್ಣು ಮತ್ತು ಸಮಾಜದ ಸಂಬಂಧದ ಸ್ವರೂಪಗಳನ್ನು ಶೋಧಿಸುವ ಕಾಲಘಟ್ಟ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

೨ ಹೆಣ್ಣು ಆಧುನಿಕತೆಯನ್ನು ತನ್ನ ಜೀವನದೊಳಗೆ ಅಳವಡಿಸಿಕೊಳ್ಳುವ ಮೂಲಕ ತನ್ನ ಅಸ್ಮಿತೆಯನ್ನು ಹೇಗೆ ಈ ಆಧುನಿಕ ಪರಿಸರದೊಳಗೆ ಕಂಡುಕೊಂಡಿದ್ದಾಳೆ ಎಂಬುದನ್ನು ಇಲ್ಲಿ ನೋಡಬಹುದಾಗಿದೆ.

೩ ಪುರುಷರ ಆತ್ಮಕಥನ ರಚನೆಗೂ, ಸ್ತ್ರೀಯರ ಆತ್ಮಕಥನಗಳ ರಚನೆಗೂ ಇರುವ ವ್ಯತ್ಯಾಸ ಮತ್ತು ಆ ಮೂಲಕ ಏರ್ಪಡುವ ಸಾಂಸ್ಕೃತಿಕ ರಾಜಕಾರಣಗಳನ್ನು ಇಲ್ಲಿ ಗುರುತಿಸಲಾಗಿದೆ.

೪ ‘ವಿವಾಹ’ ಮಾತ್ರವೇ ಹೆಣ್ಣಿನ ಸಾಮಾಜಿಕ ಅಸ್ಮಿತೆಯನ್ನು ದೃಢ ಪಡಿಸುವ ವ್ಯವಸ್ಥೆಯೇ ಎಂಬುದರ ಚರ್ಚೆಯನ್ನು ಮಾಡಲಾಗಿದೆ.

೫ ‘ಕುಟುಂಬ’ ಅದು ಮಹಿಳೆಯರ ಶೋಷಣೆಗೆ ಪ್ರದಾನಕೇಂದ್ರವಾಗಿದೆಯೇ? ಅದನ್ನು ಬಿಟ್ಟು ಹೆಣ್ಣು ಬದುಕುಲು ಸಾಧ್ಯವಿಲ್ಲವೇ? ಎಂಬ ವಿಚಾರಗಳನ್ನು ಈ ಅಧ್ಯಾಯದಲ್ಲಿ ಗ್ರಹಿಸಬಹುದಾಗಿದೆ.

೬ ‘ಪಿತೃಪ್ರಧಾನ ವ್ಯವಸ್ಥೆ’ಯಲ್ಲಿ ಹೆಣ್ಣಿಗೆ ಹೇಳಿ ಕೊಟ್ಟಿರುವ ನಿಯಮಗಳೇನು? ಅಲ್ಲಿ ಗಂಡಸರಿಗೆ ಅನುಕೂಲವಾಗಿರುವಂತಹ ನೀತಿ–ನಿಯಮಗಳೇ ಹೆಚ್ಚಾಗಿರಲು ಕಾರಣವೇನು? ಎಂಬುದರ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗಿದೆ.

೭ ‘ಲೈಂಗಿಕ ಸಂಬಂಧ’ ಎನ್ನುವುದು ಕೇವಲ ಕೌಟುಂಬಿಕ ಚೌಕಟ್ಟಿಗೆ ಮಾತ್ರ ಸೀಮಿತವೇ? ಅದು ಕುಟುಂಬದಾಚೆಗೆ ತನ್ನ ನೆಲೆಯನ್ನು ಕಂಡುಕೊಳ್ಳಲು ಕಾರಣಗಳೇನು? ಎನ್ನುವುದರ ಪ್ರಸ್ತಾಪ ಇಲ್ಲಿದೆ.

೮ ಭಾರತೀಯ ಸಾಮಾಜಿಕ ರಚನೆಯ ಒಳಗೇ ಹೆಣೆಯಲ್ಪಟ್ಟಿರುವ ಪಿತೃಪ್ರಾಧನ್ಯತೆ ಮತ್ತು ಪಾರಂಪರಿಕ ಮೌಲ್ಯಗಳು ಆಧುನಿಕ ಪರಿಸರದ ಮೌಲ್ಯಗಳೊಡನೆ ಮುಖಾಮುಖಿಯಾದಾಗ ಏರ್ಪಡುವ ಸಂಘರ್ಷವನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ.

೯ 'ಪಿತೃಪ್ರಧಾನ ಸಂಬಂದಗಳು ಮಹಿಳಾ ಚಳುವಳಿಗೆ ದಾರಿ ಮಾಡಿಕೊಡುತ್ತವೆ' ಎಂಬ ಹೇಳಿಕೆಗೆ ಈ ಆತ್ಮಕಥನ ಸಾಕ್ಷಿಯಾಗಿರುವುದನ್ನು ಈ ಅಧ್ಯಾಯದಲ್ಲಿ ನೋಡಬಹುದಾಗಿದೆ.

೧೦ ಪಿತೃಪ್ರಾಧನ್ಯತೆಯ ಮೌಲ್ಯಗಳನ್ನು ಅಂತರಂಗೀಕರಿಸಿಕೊಂಡಿರುವ ಸಮಾಜವು ಈ ಕಥನದೊಳಗಿರುವ ಜೀವನವನ್ನು ಸಹಿಸುವುದಿಲ್ಲವಾದ್ದರಿಂದ ಪ್ರತಿಭಾರವರ ಹುಡುಕಾಟ ನಿರಾಶೆಯಲ್ಲೇ ಕೊನೆಯಾಗಿರುವುದನ್ನು ಈ ಕಥನ ಹೇಳುತ್ತಿದೆ.

# ಅಧ್ಯಾಯ – ೩

# ಭಾರ್ಗವಿ ನಾರಾಯಣ್ ರವರ ಆತ್ಮಕಥನ : ನಾಟಕ ರಂಗದಲ್ಲಿ ಹೆಣ್ಣಿನ ಪ್ರತಿನಿಧೀಕರಣದ ಸ್ವರೂಪ

## ಅ. ಲೇಖಕಿಯ ಕಿರುಪರಿಚಯ :

ರಾಮಸ್ವಾಮಿ ಹಾಗೂ ನಾಮಗಿರಿಯ ಮಗಳಾದ ಭಾರ್ಗವಿ ತಮ್ಮ ೭ನೇ ವಯಸ್ಸಿಗೆ ತಂದೆಯನ್ನು ಕಳೆದುಕೊಂಡು ತಾಯಿ ಹಾಗೂ ಅಣ್ಣನೊಂದಿಗೆ ಬೆಳೆದವರು. ಹೈಸ್ಕೂಲಿನ ದಿನಗಳಲ್ಲೇ ರಂಗಭೂಮಿಯನ್ನು ಪ್ರವೇಶಿಸಿದ ಭಾರ್ಗವಿ ತದನಂತರ ಸಿನಿಮಾರಂಗಕ್ಕೂ ಕಾಲಿಟ್ಟರು. ಇತ್ತೀಚೆಗೆ ಕಿರುತೆರೆಯಲ್ಲೂ ಅಭಿನಯಿಸಿ ಪ್ರೇಕ್ಷಕರಿಂದ ಸೈ ಎನಿಸಿಕೊಂಡ ಅತ್ಯುತ್ತಮ ಕಲಾವಿದೆಯಾಗಿದ್ದಾರೆ.

'ಮೇಕಪ್‌ನಾಣಿ' ಎಂದೇ ಹೆಸರುವಾಸಿಯಾಗಿರುವ ಶ್ರೀಯುತ ಬಿ.ಎಸ್.ನಾರಾಯಣರಾವ್‌ರವನ್ನು ಮದುವೆಯಾಗಿ ಸತತ ೫೦ ವರ್ಷಗಳ ಕಾಲ ರಂಗಭೂಮಿಯಲ್ಲಿ ದಂಪತಿಗಳಿಬ್ಬರೂ ಸೇವೆ ಮಾಡಿದ್ದಾರೆ. ಪ್ರಭಾತ ಕಲಾವಿದರು, ರವಿ ಕಲಾವಿದರು, ನ್ಯಾಷನಲ್ ಕಾಲೇಜ್‌ನ ಹಿಸ್ಟ್ರಿಯೋನಿಕ್ ಕ್ಲಬ್ ಹೀಗೆ ಹಲವಾರು ಕನ್ನಡ ರಂಗಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಕುವೆಂಪುರವರ 'ಸ್ಮಶಾನ ಕುರುಕ್ಷೇತ್ರ', ಕೈಲಾಸಂರವರ 'ತಾಳಿಕಟ್ಟೋಕ್ಕೂಲೀನೇ', ಪರ್ವತವಾಣಿಯವರ 'ಬಹದ್ದೂರು ಗಂಡ' ಈ ಎಲ್ಲಾ ನಾಟಕಗಳಲ್ಲಿ ಅಭಿನಯಿಸಿರುವುದು ಭಾರ್ಗವಿಯವರಿಗೆ ಬಹಳ ಖುಷಿಯನ್ನು ತಂದುಕೊಟ್ಟಿದೆ. ರಂಗಭೂಮಿ ಎಂಬ ಪ್ರಪಂಚಕ್ಕೆ ತಮ್ಮನ್ನು ತಾವು ಅರ್ಪಿಸಿಕೊಳ್ಳುವುದರ ಜೊತೆಗೆ ತಮ್ಮ ಮಕ್ಕಳನ್ನು, ಮೊಮ್ಮಕ್ಕಳನ್ನು, ಬಂಧು-ಬಳಗದವರನ್ನೂ ಸೆಳೆದವರು ನಾಣಿ ಹಾಗೂ ಭಾರ್ಗವಿ.

ಕರ್ನಾಟಕ ನಾಟಕ ಅಕಾಡೆಮಿಯ ೧೯೯೭ರ ಗೌರವ ಪ್ರಶಸ್ತಿ, ಪ್ರೊಫೇಸರ್ ಹುಚ್ಚೂರಾಯ ಚಿತ್ರದ ಅಭಿನಯಕ್ಕಾಗಿ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಹಾಗೂ ೨೦೦೫ರ

ಆಳ್ವಾಸ್ ನುಡಿಸಿರಿ ಪ್ರಶಸ್ತಿಯನ್ನು ಪಡೆದಿರುವ ಭಾರ್ಗವಿ ನಾರಾಯಣ್ ಬರೆದಿರುವ ತಮ್ಮ ಬದುಕಿನ ಅನುಭವಗಳ ಮೊತ್ತವೇ "ನಾನು ಭಾರ್ಗವಿ". ಈ ಆತ್ಮಕಥನವನ್ನು ಓದುವ ಓದುಗನಿಗೆ ತಾಳ್ಮೆ ಇರಬೇಕು. ಕಾರಣ ಎಷ್ಟೋ ಸಾವು-ನೋವು, ದುಃಖ, ವಿಧವೆಯರ ಬದುಕು, ಕೂಡು ಕುಟುಂಬದ ಸಂಬಂಧಗಳನ್ನು ಈ ಆತ್ಮಕಥನ ಒಳಗೊಂಡಿರುವುದರಿಂದ ಓದಲು ಹೆಚ್ಚು ಕ್ಲಿಷ್ಟವೆಂದು ಭಾಸವಾಗುತ್ತದೆ.

"ನಾಟಕ, ಸಿನಿಮಾ, ಸರ್ಕಾರಿ ನೌಕರಿ, ಸಂಸಾರ ಹೀಗೆ ತಮ್ಮ ಜೀವನದೊಳಗೆ ಸರಿಸಮಾನವಾಗಿ ಎಲ್ಲವನ್ನೂ ದೂಗಿಸಿಕೊಂಡು ಹೋಗುತ್ತಿರುವ ಭಾರ್ಗವಿಯವರ ಬಾಳಿನ ಈ ಕಥನ ಮುಂಬರುವ ಪೀಳಿಗೆಗಳ ಹೆಣ್ಣುಮಕ್ಕಳಿಗೆ ಹೆಚ್ಚು ಪ್ರಸ್ತುತವಾದೀತು" ಎಂಬುದು ಈ ಆತ್ಮಕಥನಕ್ಕೆ ಮುನ್ನುಡಿ ಬರೆದಿರುವ ಖ್ಯಾತ ಸಿನಿಮಾ ನಟರಾದ ಅನಂತನಾಗ್‌ರವರ ಅಭಿಪ್ರಾಯ.

## ಆ. ಆತ್ಮಕಥನದ ಪರಿಚಯ :

ರಂಗಭೂಮಿಯಲ್ಲಿ ಅರ್ಧ ಶತಮಾನಗಳಷ್ಟು ಕಾಲ ತಮ್ಮನ್ನು ತಾವು ಅರ್ಪಿಸಿಕೊಂಡವರು ಭಾರ್ಗವಿ. ಇದೇ ರಂಗಭೂಮಿಯ ಮೂಲಕ ಪರಿಚಿತರಾದ ನಾಣಿ ಜೊತೆ ಒಪ್ಪದೆಯೇ ಒಪ್ಪಿ ಮದುವೆ ಆಗಿ ಸುಜಾತ, ಪ್ರಕಾಶ, ಸುಧಾ, ಪ್ರದೀಪ ಎಂಬ ನಾಲ್ಕು ಮಕ್ಕಳಿಗೆ ತಾಯಿಯಾದ ಭಾರ್ಗವಿ ತಮ್ಮ ವಿವಾಹದ ನಂತರ ಭಾರ್ಗವಿ ನಾರಾಯಣ್ ಎಂದೇ ಪರಿಚಿತರಾಗಿದ್ದಾರೆ.

'ವಿವಾಹ' ಎಂಬುದು ಯಾವುದೇ ವ್ಯಕ್ತಿಯ ಜೀವನದಲ್ಲಿ ಒಂದು ಮುಖ್ಯ ಘಟ್ಟ, ಇದೊಂದು 'ಸುರಕ್ಷಿತವಾದ ವಲಯ' ಎಂಬ ಅನಿಸಿಕೆ ಆಧುನಿಕ ಜಗತ್ತಿನೊಳಗೂ ಇದೆ. ಈ ವೈವಾಹಿಕ ಜೀವನದಲ್ಲಿ ಪತಿ-ಪತ್ನಿಯರಲ್ಲಿ ಪರಸ್ಪರ ಹೊಂದಾಣಿಕೆ ಇದ್ದರೆ ಅವರಿಬ್ಬರ ಸಂಬಂಧವೂ ಅಷ್ಟೇ ಆದರ್ಶಮಯವಾಗಿದ್ದು ಜೀವನ ಸುಖವಾಗಿರುತ್ತದೆ ಎಂಬುದು ಭಾರ್ಗವಿಯವರ ಅನಿಸಿಕೆ.

೨೦೧೨ರಲ್ಲಿ ಮೊದಲ ಮುದ್ರಣಗೊಂಡಿರುವ 'ನಾನು, ಭಾರ್ಗವಿ' ಎಂಬ ಆತ್ಮಕಥನವನ್ನು 'ನನ್ನನ್ನು ನಾನಾಗಿ ಉಳಿಯಲು ಅನುವು ಮಾಡಿಕೊಟ್ಟ ಅಮ್ಮ ಹಾಗೂ ನಾಣಿಯವರಿಗೆ ಅರ್ಪಣೆ' ಎಂದು ಹೇಳಿದ್ದಾರೆ ಭಾರ್ಗವಿ.

ಹೋಂ ರೂಲ್ ನಾಟಕದಿಂದಲೇ ಪ್ರಾರಂಭವಾಗುವ ಭಾರ್ಗವಿಯವರ ಆತ್ಮಕಥನ ಕಳೆದ ೫ ದಶಕಗಳ ಬೆಂಗಳೂರಿನ ಕನ್ನಡ ರಂಗಭೂಮಿಯ ಇತಿಹಾಸವೋ, ಕನ್ನಡ ಕಲಾತ್ಮಕ ಚಿತ್ರಗಳ ಆರಂಭದ ದಿವಸಗಳ ದಿನಚರಿಯೋ, ೩ ದಶಕಗಳಿಗಿಚಿತ ಅಧಿಕ ಕಾಲ ಸರ್ಕಾರಿ ನೌಕರಿಯ ವ್ಯವಸ್ಥೆಯಲ್ಲಿದ್ದುಕೊಂಡು ನಡೆಸಿದ ಹೋರಾಟವೋ ಎಂಬಂತೆ ಭಾಸವಾಗುತ್ತದೆ.

ಇಂದಿನ ಟಿ.ವಿ. ಧಾರಾವಾಹಿಗಳ ವೀಕ್ಷಕರಿಗೆಲ್ಲ ಬಲು ಪರಿಚಿತರಾದವರೇ ಭಾರ್ಗವಿ ನಾರಾಯಣ್. ನಾಟಕ ಪ್ರಿಯರಿಗೆಲ್ಲ ಮೆಚ್ಚಿನ ಕಲಾವಿದೆ. ಸಣ್ಣ ವಯಸ್ಸಿನಲ್ಲಿ ಇವರ ಮನೆಯ ಅಂಗಳವೇ ಇವರಿಗೆ ನಾಟಕದ ರಂಗಶಾಲೆಯಾಗಿತ್ತು. ಮುಂದೆ ಶಾಲಾ-ಕಾಲೇಜುಗಳಲ್ಲೂ ನಾಟಕದ ಬಗ್ಗೆ ಅಪಾರ ಆಸಕ್ತಿ ಉಳ್ಳಂತಹ ಅತ್ಯುತ್ತಮ ಕಲಾವಿದೆಯಾಗಿದ್ದರು.

ತಮ್ಮ ೭ನೇ ವಯಸ್ಸಿಗೆ ತಂದೆಯನ್ನು ಕಳೆದುಕೊಂಡು ತಾಯಿ ನಾಮಗಿರಿ, ಅಣ್ಣ ಚಿಂತಾಮಣಿ ಮತ್ತು ತಂದೆಯ ವಿಧವೆ ಅಕ್ಕನ ಜೊತೆ ನಡೆಸಿದ ಆ ಬದುಕಿನ ದಿನಗಳು ಬಹಳ ದುಃಖದಿಂದ ಹಾಗೂ ಬಡತನದಿಂದ ಕೂಡಿತ್ತು ಎಂಬುದನ್ನು ತಮ್ಮ ಆತ್ಮಕಥನದಲ್ಲಿ ವಿವರಿಸಿದ್ದಾರೆ. ವೈಯಕ್ತಿಕ ಜೀವನವನ್ನೂ, ಕೌಟುಂಬಿಕ ಬದುಕನ್ನೂ, ನಾಟಕರಂಗ ಹಾಗೂ ಚಿತ್ರರಂಗದ ಅನುಭವಗಳನ್ನೂ ಯಥಾರ್ಥವಾಗಿ ಲಜ್ಜೆ-ಭಿಡೆ-ಸಂಕೋಚವಿಲ್ಲದೆ ನಿರ್ದಾಕ್ಷಿಣ್ಯವಾಗಿ ಭಾರ್ಗವಿ ಬರೆದಿರುವುದನ್ನು ನೋಡಬಹುದಾಗಿದೆ.

ತಮ್ಮ ೧೬ನೇ ವಯಸ್ಸಿನಲ್ಲಿ ವಿಜಯಾ ಕಾಲೇಜಿನಲ್ಲಿದ್ದಾಗ ಕೈಲಾಸಂರವರ ಹೋಂ ರೂಲ್ ನಾಟಕ ಮಾಡುವಾಗ ರಾಮಣ್ಣನ ಪಾತ್ರವನ್ನು ಭಾರ್ಗವಿ ವಹಿಸಿದ್ದರು ಆಗ ಅವರಿಗೆ ಮೇಕಪ್ ಮಾಡಲು ಬಂದವರೇ ನಾಣಿ. ಅದೇ ನಾಣಿ ಹಾಗೂ ಭಾರ್ಗವಿಯವರು ಭೇಟಿಯಾದ ಮೊದಲ ಕ್ಷಣಗಳು. ಗಂಡು ಬೀರಿಯಂತಿದ್ದ ಭಾರ್ಗವಿಗೆ ನಾಟಕಕ್ಕಾಗಿ ಮೀಸೆ ಅಂಟಿಸಿದ ಸಂದರ್ಭದಲ್ಲಿ ನಾಣಿಯೊಂದಿಗೆ ಆದ ಮಾತುಕತೆಯನ್ನು ನವಿರಾದ ಹಾಸ್ಯದೊಂದಿಗೆ ಪ್ರಸ್ತಾಪಿಸಿದ್ದಾರೆ. ಭಯ, ಭೀತಿ, ಗಾಬರಿ, ಸಂಕೋಚ, ವಯ್ಯಾರ ಇವೆಲ್ಲ ಬೇರೆ ಹೆಣ್ಣು ಮಕ್ಕಳಿಗೆ ಇರುವಂಥ ಸಾಮಾನ್ಯ ಲಕ್ಷಣಗಳು ಭಾರ್ಗವಿಯವರಿಗೆ ಇರಲಿಲ್ಲ.

ಶಿಸ್ತಿಗೆ ಇರುವ ಇನ್ನೊಂದು ಹೆಸರೇ ನಾಣಿ ಎಂಬಂತೆ ನಾಣಿ ಜೀವಿಸಿದ್ದರು. ಅವರನ್ನು ಸರಳವಾಗಿ ಪ್ರೇಮವಿವಾಹವಾದ ಭಾರ್ಗವಿಯವರು ನಡೆಸಿದ ಜೀವನವೂ ಸರಳವೇ. ಕಷ್ಟದಲ್ಲೇ ೪ ಮಕ್ಕಳ ಊಟ, ತಿಂಡಿ, ವಿದ್ಯೆ, ಮದುವೆ ಹೀಗೆ ಎಲ್ಲವೂ ನಡೆಯಿತು. ಬೆಳಗಿನಿಂದ ಸಂಜೆಯವರೆಗೆ ಸರ್ಕಾರಿ ಕೆಲಸ ನಂತರ ಕಲಾಕ್ಷೇತ್ರದಲ್ಲಿ ಯಾವುದೋ ನಾಟಕದ ಅಭ್ಯಾಸ

ಆನಂತರದಲ್ಲಿ ಮನೆ–ಮಕ್ಕಳು–ಅಡುಗೆ–ಊಟ–ಉಪಚಾರ–ಬಂಧು–ಬಳಗ ಈ ಎಲ್ಲ ಒತ್ತಡಗಳ ನಡುವೆ ಸ್ವಲ್ಪವೂ ವಿಚಲಿತರಾಗದೇ ಈ ಎಲ್ಲ ಒತ್ತಡದ ಮಧ್ಯೆ ರಂಗಭೂಮಿಯನ್ನು ಬಿಡದೆ ಅದರೊಂದಿಗೆ ಇಂದಿಗೂ ಬದುಕುತ್ತಿದ್ದಾರೆ.

"ಮನುಷ್ಯನಿಗೆ ಎಲ್ಲ ಸಮಸ್ಯೆಗಳಿಂದ ಸ್ವಲ್ಪ ಹೊತ್ತಾದರೂ ಮುಕ್ತಿ ಬೇಕಿದ್ದರೆ ಒಂದಲ್ಲ ಒಂದು ಹವ್ಯಾಸದ ಅವಶ್ಯಕತೆ ಇದೆ. ಅದು ಸಂಗೀತ ಇರಬಹುದು–ಓದು–ಕ್ರೀಡೆ–ಬರವಣಿಗೆ–ನಾಟ್ಯ–ನಾಟಕ–ಪದಬಂಧ– ಎಂಥದ್ದೋ ಒಂದು ಮನಸ್ಸು ಸಮಚಿತ್ತವಾಗಿ ಸಂತೋಷವಾಗಿ ಇರಬೇಕಾದ್ರೆ–ತನಗಾಗಿ–ತನ್ನ ಸಂತೋಷಕ್ಕಾಗಿ ಸ್ವಲ್ಪ ಸಮಯವನ್ನು ಕಾದಿರಿಸಲೇ ಬೇಕು"[೩೧]ಎಂಬ ಅತ್ಯುತ್ತಮವಾದ ಸಾಲುಗಳನ್ನು ಹೇಳುವ ಮೂಲಕ ಸಾಮಾನ್ಯ ಜನರೂ ತಮ್ಮ ಬದುಕನ್ನು, ಮನಸ್ಸನ್ನು ಹೇಗೆ ಇರಿಸಿಕೊಳ್ಳಬೇಕೆಂಬುದನ್ನು ತಮ್ಮ ಆತ್ಮಕಥನದಲ್ಲಿ ತಿಳಿಸಿದ್ದಾರೆ.

ಭಾರ್ಗವಿ ಹಾಗೂ ನಾಣಿ ಪ್ರೇಮ ವಿವಾಹವಾಗಿ ತಮ್ಮ ಮಕ್ಕಳ ಪ್ರೇಮವಿವಾಹಕ್ಕೂ ಒಪ್ಪಿದವರು. ತನು–ಮನ–ಧನದಿಂದ ತಮ್ಮನ್ನು ತಾವು ಕನ್ನಡ ರಂಗಭೂಮಿಗೆ ಅರ್ಪಿಸಿಕೊಂಡಿರುವುದಲ್ಲದೇ ತಮ್ಮ ಮಕ್ಕಳು ಮೊಮ್ಮಕ್ಕಳನ್ನೂ, ಬಂಧು–ಬಳಗ, ಆಪ್ತೇಷ್ಟರನ್ನೂ ರಂಗ ಮಂಚದ ಮಾಯಾವಿ ಲೋಕಕ್ಕೆ ಸೆಳೆದವರು ನಾಣಿ ಹಾಗೂ ಭಾರ್ಗವಿ

ಸತತವಾಗಿ ೩೦ ವರ್ಷಗಳ ಕಾಲ ಸರ್ಕಾರಿ ನೌಕರಿಯಲ್ಲಿ ಕಾರ್ಯ ನಿರ್ವಹಿಸಿ ಅದರ ಮಧ್ಯೆ ೪ ಮಕ್ಕಳನ್ನು ಹೆತ್ತು–ಹೊತ್ತು–ರಜೆಗಳಿಗಾಗಿ ಪರದಾಡಿ ಸಂಜೆ ೬ಕ್ಕೆ ಕೆಲಸ ಮುಗಿಸಿ ನಂತರ ಕಲಾಕ್ಷೇತ್ರದಲ್ಲಿ ನಾಟಕ ಅಭ್ಯಾಸ ಮಾಡಿ ದಣಿದ ಭಾರ್ಗವಿ ೧೯೮೪ ಮಾರ್ಚ್‌ನಲ್ಲಿ ತಮ್ಮ ಸರ್ಕಾರಿ ವೃತ್ತಿಯಿಂದ ವಾಲಂಟರಿ ರಿಟೈರ್‌ಮೆಂಟ್ ತೆಗೆದುಕೊಂಡರು. ಬಿಎಸ್ಸಿ ಪದವೀಧರೆಯಾದ ಈ ಭಾರ್ಗವಿಗೆ ದೇವರ ಮೇಲೆ ಅಪಾರ ಭಕ್ತಿ ಹಾಗೂ ನಂಬಿಕೆ ಇತ್ತು ಎಂಬುದನ್ನು ಅವರೇ ಹೇಳಿರುವ ಈ ಸಾಲುಗಳಲ್ಲಿ ನೋಡಬಹುದಾಗಿದೆ;–"ದೇವರಾಣೆಗೂ ಹೇಳ್ತೀನಿ– I have nothing to crib ಅಂತಹ ಹಣ–ಅಂತಸ್ತು–ರೂಪರಾಶಿ ಇಲ್ಲದ ನನ್ನ ಮೆಚ್ಚಿ ಮೆಚ್ಚಿ ಮದುವೆ ಆದ್ರು ನಾಣಿ ಅಂತ ಸಭ್ಯ ಮನುಷ್ಯ. ಸಾಕಷ್ಟು ಸಂತೋಷವಾಗಿ, ಮರ್ಯಾದೆಯ ಜೀವನ ನಡೆಸಿದಿವಿ. ಮನುಷ್ಯ ಸಂಸಾರ ಅಂದ್ಮೇಲೆ ಸಣ್ಣಪುಟ್ಟ ನೋವು–ಕಷ್ಟ ಇರೋದೆ. ಅಂಥಾವನ್ನೆಲ್ಲಾ ಧೈರ್ಯದಿಂದ ಧೃತಿಗೆಡದೆ ನಿಭಾಯಿಸಿಕೊಂಡು ಹೋಗೋ ಶಕ್ತಿ

---

೩೧. ನಾನು, ಭಾರ್ಗವಿ: ಪುಟ–೨೮೨

೩೨. ಅದೇ: ಪುಟ–೨೦೬

ಕೊಟ್ಟಿದ್ದಾನೆ ಆ ದೇವರು"[೨]ಎಂದು ಬಲವಾಗಿ ನಂಬಿದ್ದಾರೆ. ಭಾರ್ಗವಿ ಇಂತಹ ಕೆಲವು ಸಾಲುಗಳು ಭಾರ್ಗವಿಯವರಿಗೆ ದೇವರ ಮೇಲಿದ್ದ ಅಪಾರ ನಂಬಿಕೆ ಹಾಗೂ ಭಕ್ತಿಯನ್ನು ವ್ಯಕ್ತಪಡಿಸುತ್ತದೆ. 'ದೈವಂ ಮಾನುಷ ರೂಪೇಣ' ಎನ್ನುವ ಪದಪ್ರಯೋಗವನ್ನೂ ಆತ್ಮಕಥನ ಕೆಲವು ಕಡೆ ನೋಡಬಹುದು.

ಒಂದು ಕಾಲಕ್ಕೆ "ನಾನು ರಂಗಭೂಮಿ ಕಲಾವಿದೆ, ಸಿನಿಮಾದಲ್ಲಿ ಮಾಡುವುದಿಲ್ಲ" ಎಂದು ಹೇಳಿದ್ದ ಭಾರ್ಗವಿ ನಾಣಿಯವರ ಬಲವಂತದಿಂದಾಗಿ 'ಆಷಾಡಭೂತಿ' ನಾಟಕವನ್ನು ಆಧರಿಸಿ ಕೃಷ್ಣಸ್ವಾಮಿಯವರು ತಯಾರಿಸಿದ 'ಸುಬ್ಬಾಶಾಸ್ತ್ರಿ' ಎಂಬ ಸಿನಿಮಾದಲ್ಲಿ ಸಣ್ಣ ಪಾತ್ರವೊಂದರ ಮೂಲಕ ಬೆಳ್ಳಿತೆರೆಯನ್ನು ಪ್ರವೇಶಮಾಡಿದ ಭಾರ್ಗವಿ ಅಲ್ಲಿಯವರೆಗೂ ಸ್ಮಶಾನ ಕುರುಕ್ಷೇತ್ರ, ಕದಡಿದ ನೀರು, ಬರ, ಆಷಾಡದ ಒಂದು ದಿನ, ಚಾಕಲೇಟ್ ಸಿಪಾಯಿ, ತಾಳಿಕಟ್ಟೋಕ್ಕೂಲೀನೇ, ಕಾಕನಕೋಟೆ, ಪೋಲಿಕಿಟ್ಟಿ, ಹುತ್ತವ ಬಡಿದರೆ, ಗೆಲಿಲಿಯೋ, ಮುಖ್ಯಮಂತ್ರಿ, ಜೋಕುಮಾರಸ್ವಾಮಿ, ಹಯವದನ, ಮೀಸೆ ಬಂದೋರು, ಬಾಕಿ ಇತಿಹಾಸ, ಸಂಗ್ಯಾಬಾಳ್ಯ, ಸುಂದ್ರೋಪಸುಂದ್ರು, ಶೃಂಗಾರ ಲಹರಿ, ಹೋಂರೂಲ್, ಭೈರವಿ, ಅಜ್ಜಿ ಆಸ್ತಿ, ಶೋಕ ಚಕ್ರ, ಅಮ್ಮ ರಿಟೈರ್ ಆಗ್ತಾಳೆ ಹೀಗೆ ಹಲವಾರು ನಾಟಕಗಳಿಗೆ ಮಾತ್ರ ಬಣ್ಣ ಹಚ್ಚುತ್ತಿದ್ದರು.

ಕನ್ನಡ ಭಾಷೆಯ ನಾಟಕಗಳಲ್ಲದೇ ಕೆ.ವಿ.ಅಯ್ಯರ್‌ರವರು ನಿರ್ದೇಶಿಸಿದ 'ಪ್ರಪಂಚ ಪಾಣಿಪತ್ತು', ಕೈಲಾಸಂ ರವರ 'ಕರ್ಣ' ಎಂಬ ಆಂಗ್ಲಭಾಷೆಯ ನಾಟಕದಲ್ಲೂ ಅಭಿನಯಿಸಿದ್ದರು. ಜೊತೆಗೆ ಬಿ.ವಿ.ಕಾರಂತರು ನಿರ್ದೇಶಿಸಿದ 'ಗೋಷ್ಟ್' ಎಂಬ ಆಂಗ್ಲ ನಾಟಕದ ಕನ್ನಡ ರೂಪಾಂತರ ನಾಟಕದಲ್ಲೂ ಮುಖ್ಯ ಪಾತ್ರ ನಿರ್ವಹಿಸಿದ್ದರು.

೧೯೬೫ರಲ್ಲಿ ಸುಬ್ಬಾಶಾಸ್ತ್ರಿ ಸಿನಿಮಾದಲ್ಲಿ ನಟಿಸಿದ ಭಾರ್ಗವಿಗೆ ಸಿನಿಮಾ ರಂಗದಲ್ಲೂ ಸಭ್ಯ ಜನ ಕೆಲಸ ಮಾಡಬಹುದೆನಿಸಿತು. ನಂತರ ೧೯೬೮-೬೯ರಲ್ಲಿ ಗಿರೀಶ್ ಕಾರ್ನಾಡ್ ನಿರ್ದೇಶಿಸಿದ 'ಸಂಸ್ಕಾರ' ಸಿನಿಮಾದಲ್ಲಿ ಅಭಿನಯಿಸಿದರು ಭಾರ್ಗವಿ. ಈ ಸಿನಿಮಾ ಕನ್ನಡ ಚಲನಚಿತ್ರಕ್ಕೆ ಮೊದಲ ಸ್ವರ್ಣ ಪದಕವನ್ನು ರಾಷ್ಟ್ರ ಮಟ್ಟದಲ್ಲಿ ತಂದುಕೊಟ್ಟಿತು. ಆನಂತರ ಅಯ್ಯರ್‌ರವರು ನಿರ್ಮಿಸಿದ 'ವಂಶವೃಕ್ಷ'ದಲ್ಲಿ ಭಾರ್ಗವಿ ಹಾಗೂ ನಾಣಿಯರಿಬ್ಬರೂ ಅಭಿನಯಸಿದ್ದರು. ತದನಂತರ ಆಲನಹಳ್ಳಿ ಕೃಷ್ಣರವರು ನಿರ್ದೇಶಿಸಿದ 'ಕಾಡು' ಚಿತ್ರದಲ್ಲೂ ಅಭಿನಯಿಸುತ್ತಾ ಕೆಲವು ಆಕಾಶವಾಣಿ ನಾಟಕಗಳಲ್ಲೂ ಆಗಾಗ ಭಾಗವಹಿಸುತ್ತಿದ್ದ ಭಾರ್ಗವಿಗೆ ನರಸಿಂಹರಾಜು ನಿರ್ಮಿಸುತ್ತಿದ್ದ 'ಪ್ರೊಫೇಸರ್ ಹುಚ್ಚೂರಾಯ' ಚಿತ್ರಕ್ಕೆ ಕರೆ ಬಂದಿತು, ಆದರೆ

ಭಾರ್ಗವಿ ಆ ಸಿನಿಮಾದಲ್ಲಿ ನಟಿಸುವುದಕ್ಕೆ ಹಿಂದೆ ಸರಿದರು ಕಾರಣ ಅಷ್ಟು ಹೊತ್ತಿಗಾಗಲೇ ಭಾರ್ಗವಿ ೪ ಮಕ್ಕಳ ತಾಯಿಯಾಗಿದ್ದರು; ಸಿನಿಮಾದಲ್ಲಿ ಇನ್ನೂ ಮದುವೆ ಆಗಿರದ ನರಸಿಂಹರಾಜುವಿನ ತಂಗಿಯ ಪಾತ್ರವನ್ನು ಮಾಡಬೇಕಿದ್ದರಿಂದ ಆಕೆ ನಿರಾಕರಿಸಿದರು ತದನಂತರ ಶಿವರಾಂ ಹಾಗೂ ನರಸಿಂಹರಾಜುರವರು ವಿಷಯ ತಿಳಿದು ಪರವಾಗಿಲ್ಲ ಆ ಪಾತ್ರಕ್ಕೆ ನೀವು ಸರಿಯಾಗಿ ಹೊಂದುತ್ತೀರ, ನೀವೇ ಆ ಪಾತ್ರವನ್ನು ನಿರ್ವಹಿಸಬೇಕೆಂದು ಬಲವಂತ ಮಾಡಿದಾಗ ಕಡೆಗೆ ಭಾರ್ಗವಿ ಆ ಚಿತ್ರದಲ್ಲಿ ಅಭಿನಯಿಸಲು ಒಪ್ಪಿಕೊಂಡರು.

ಆ ವರ್ಷದ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿಯನ್ನು ಆ ಸಿನಿಮಾದಲ್ಲಿ ಅಭಿನಯಿಸಿದ್ದಕ್ಕಾಗಿ ಭಾರ್ಗವಿಯವರಿಗೆ ಲಭಿಸಿತು. ಮುಂದೆ 'ಮುಯ್ಯಿ', 'ಅವಸ್ಥೆ' ಸಿನಿಮಾದಲ್ಲಿ ನಟಿಸಿದ ಭಾರ್ಗವಿ ಹೆಚ್ಚು ಸಿನಿಮಾಗಳಲ್ಲಿ ಅಭಿನಯಿಸದೇ ನಾಟಕಗಳಲ್ಲೇ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಇತ್ತೀಚೆಗೆ ಮುಕ್ತ, ಋತುಮಾನ, ಹಂಬಲ, ಗರ್ವ, ಸುಪನಾತಿ ಸುಬ್ಬಿ ಹೀಗೆ ಹಲವಾರು ಧಾರಾವಾಹಿಗಳಲ್ಲಿ ನಟಿಸಿದ್ದಾರೆ.

ನಾಣಿ ತಮ್ಮ ೭೫ನೇ ವಯಸ್ಸಿನಲ್ಲಿ ಹೃದಯಾಘಾತದಿಂದ ತನ್ನನ್ನು ಅಗಲಿದರು ಎಂಬುದನ್ನು 'ನಾಣಿಯಿಲ್ಲದ ಗ್ರೀನ್ ರೂಮ್' ಎಂಬ ಭಾಗದಲ್ಲಿ ಭಾರ್ಗವಿ ಬಹಳ ದುಃಖದಿಂದ ಹೇಳಿಕೊಂಡಿದ್ದಾರೆ.

ನಾಣಿ ಅಂದಿನಕಾಲಕ್ಕೆ ಅಂದರೆ ೧೯೭೩ರಲ್ಲೇ ಮಹಡಿ ಮನೆಯನ್ನು ಕಟ್ಟಿಸಿ ಆ ಮನೆಗೆ 'ಗ್ರೀನ್ ರೂಮ್' ಎಂದು ಹೆಸರಿಟ್ಟಿದ್ದರು. ಆ ಮನೆಯ ಬಗ್ಗೆ ಭಾರ್ಗವಿ ಹೀಗೆ ಹೇಳಿದ್ದಾರೆ. "ಮನೆಗೆ ಫ್ಲಾನ್ ಹಾಕಿದ್ದಾಗ, ಗ್ಯಾರೇಜು ಮನೆಯ ಮುಂದೆ ಕಾರು ಅವರೇ ಬರೆದಿದ್ದ ಫ್ಲಾನ್ ಅದು. ನನಗೆ ಒಂದು ನಗು–ಕಾರು ಗ್ಯಾರೇಜು, ಯಾಕೆ ಎಂದು ಆಗ ನಾಣಿಯವರ ಸಂಬಳ ೪೫೦/– ತಿಂಗಳಿಗೆ. ನನಗೆ ೨೭೫/–ರೂ, ಮನೆ ಕಟ್ಟಿದ ಸಾಲ ತೀರಿಸುವುದೇ ಕಷ್ಟ ಎನ್ನುವ ಭಾವನೆ ನಂಗೆ. ಸಾಕಷ್ಟು ದೊಡ್ಡದಾದ ಮನೆಯನ್ನೇ ಕಟ್ಟಿಸಿದರು. ಈಗಿನ ಕಾಲಕ್ಕೂ ಆಧುನಿಕ ಎನಿಸುವಂತೆ ಇತ್ತು ಅವರು ಬರೆದ ಫ್ಲಾನ್. ೧೯೭೩ರಲ್ಲಿಯೇ ಮನೆಗೆ ಫ್ಯಾನ್, ಫೋನ್, ಫ್ರಿಡ್ಜ್, ಮ್ಯೂಸಿಕ್ ಸಿಸ್ಟಮ್, ಕಾರ್ ಎಲ್ಲಾ ಬಂತು. ಎಲ್ಲವನ್ನು ಕಂತುಗಳಲ್ಲೆ ತೆಗೆದುಕೊಂಡಿದ್ದರು. ಒಂದು ತಿಂಗಳೂ ತಪ್ಪದಂತೆ ಎಲ್ಐಸಿಯ ಹೋಮ್ ಲೋನ್‌ನ ಹಣ ಕಟ್ಟುವುದಷ್ಟೇ ಅಲ್ಲ ಆ ಸಾಲ

ತೀರುತ್ತಿದ್ದಂತೆ ಮಹಡಿ ಕಟ್ಟಿಸುವುದಕ್ಕಾಗಿ ಮತ್ತೆ ಎಲ್ಐಸಿಯಿಂದ ಸಾಲ ಪಡೆದು ೧೯೭೮ರಲ್ಲಿ ಮಹಡಿಯನ್ನು ಕಟ್ಟಿಸಿ ಪೂರೈಸಿದರು.[೩೨]

ನಾಟಕ, ಸಿನಿಮಾ, ಆಫೀಸ್, ಸಂಸಾರ ಹೀಗೆ ಎಲ್ಲವೂ ಜೊತೆ ಜೊತೆಯಲ್ಲೇ ನಡೆಸಿಕೊಂಡು ಜೀವನವನ್ನು ಸಾಗಿಸಿದ ಭಾರ್ಗವಿ 'ವೃತ್ತಿ-ವೈವಾಹಿಕ ಬದುಕಿನ ಏರಿಳಿತದ ಹಾದಿಯಲ್ಲಿ' ಎಂಬ ಶೀರ್ಷಿಕೆಯಡಿ ತಿಳಿಸಿದ್ದಾರೆ.

ಇಷ್ಟು ವರ್ಷಗಳ ಕಾಲ ತಮ್ಮ ಜೀವನದಲ್ಲಿ ನಾಟಕ ರಂಗಕ್ಕೆಂದೇ ಹೆಚ್ಚು ಸಮಯವನ್ನು ಮೀಸಲಿಟ್ಟ ಕೆಲವೇ ಕೆಲವು ಮಹಿಳೆಯರಲ್ಲಿ ಭಾರ್ಗವಿ ನಾರಾಯಣ್‌ರವರೂ ಒಬ್ಬರು. ಹಲವಾರು ಧಾರಾವಾಹಿಗಳಲ್ಲಿ ನಟಿಸಿ ಪ್ರೇಕ್ಷಕರಿಂದ ಸೈ ಎನಿಸಿಕೊಂಡಿದ್ದರೂ ಭಾರ್ಗವಿಯವರಿಗೆ ರಂಗಭೂಮಿಯಲ್ಲೇ ಹೆಚ್ಚು ಆಸಕ್ತಿ.

## ಇ. ನಾಟಕ ರಂಗದಲ್ಲಿ ಹೆಣ್ಣಿನ ಪ್ರತಿನಿಧೀಕರಣದ ಸ್ವರೂಪ :

ನಾಟಕಗಳು ಆಧುನಿಕ ಸಮಾಜದ ಬಹುಮುಖ್ಯವಾದ ಸಂಸ್ಕೃತಿ ಕಥನಗಳಾಗಿವೆ. ನಾಟಕ ಮತ್ತು ಸಿನಿಮಾ ಎಂದರೆ ವ್ಯಕ್ತಿಯ ವೈಯಕ್ತಿಕ ವ್ಯಕ್ತಿತ್ವವನ್ನು ಅಡವಿಟ್ಟು ಬದುಕ ಬೇಕಾದ ಕ್ಷೇತ್ರಗಳು ಎನ್ನುವ ಗ್ರಹೀತವನ್ನು ಈ ಆತ್ಮಕಥನ ಸುಳ್ಳು ಮಾಡುತ್ತದೆ. ಯಾವುದೇ ರೀತಿಯ ಆ ಬಗೆಯ ಹೊಂದಣಿಕೆ ಇಲ್ಲದೇ ಗಂಡ-ಹೆಂಡತಿ(ಭಾರ್ಗವಿ-ನಾರಾಯಣ್) ಅವರಿಬ್ಬರ ಜೀವನದ ಉಸಿರೇ ಆಗಿರುವ ನಾಟಕ ಕ್ಷೇತ್ರದಲ್ಲಿ ಬಾಳುತ್ತ ಬದುಕುತ್ತಾ ಪೋಷಿಸುತ್ತಾ ತಮ್ಮತನವನ್ನೂ ಉಳಿಸಿಕೊಳ್ಳುವ ಒಂದು ಕಥನವಾಗಿ ಇದು ಕಂಡುಬರುತ್ತದೆ.

ಮೇಲು ಜಾತಿಯ ಮಧ್ಯಮ ವರ್ಗದ ಸಂವೇದನೆಗಳನ್ನು ಕಟ್ಟಿಕೊಡುವ ಈ ಕಥನ ಮಧ್ಯಮ ವರ್ಗದ ಎಲ್ಲಾ ರೀತಿ-ರಿವಾಜು, ನಂಬಿಕೆ, ಆಚರಣೆಗಳಿಗೆ ಕುತ್ತು ಬರದಂತೆ ಜೊತೆಯಲ್ಲಿ ಸಮಾಜೋ ಸಾಂಸ್ಕೃತಿಕ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಪಷ್ಟ ಅಸ್ಮಿತೆಯನ್ನು ರೂಪಿಸಿಕೊಳ್ಳುವ ಕಥನವಾಗಿ ಇದು ಕಂಡು ಬರುತ್ತದೆ.

ಸಾಮಾಜಿಕ ವಲಯದಲ್ಲಿ ಸಿನಿಮಾ, ನಾಟಕ ಮುಂತಾದ ಮಾಧ್ಯಮಗಳ ಬಗ್ಗೆ ಸಾರ್ವನಿಕರ ಅಭಿಪ್ರಾಯವೇನೆಂದರೆ ಇವು ಹೆಣ್ಣನ್ನು ಶೋಷಿಸುವ ಮತ್ತು ಭೋಗದ ವಸ್ತುವನ್ನಾಗಿ ಮಾಡುವ ಕ್ಷೇತ್ರ ಎಂದು ಪರಿಗಣಿತವಾಗಿದೆ. ಈ ಕಾರಣದಿಂದಲೇ ಇಲ್ಲಿನ

---

೩೨. ನಾನು, ಭಾರ್ಗವಿ: ಭಾರ್ಗವಿ ನಾರಾಯಣ್; ಪುಟ-೨೧೧

ಹೆಣ್ಣುಗಳು ಒಂದು ಸುಖವಾದ ಸಂಸಾರವನ್ನು ನಡೆಸುವುದಕ್ಕೆ ಸಾಧ್ಯವಿಲ್ಲದ ಸ್ಥಿತಿಯಲ್ಲಿರುತ್ತಾರೆಂಬ ಕಲ್ಪನೆಗಳಿವೆ. ಆದರೆ ಭಾರ್ಗವಿಯವರ ಆತ್ಮಕಥನ ಜನಸಾಮಾನ್ಯರಲ್ಲಿರುವ ಈ ಅಭಿಪ್ರಾಯವನ್ನು ನಿರಾಕರಿಸುವಂತಹ ಕಥನವಾಗಿದೆ. ವೈಯಕ್ತಿಕತೆಯಿರುವ ಮಹಿಳೆಯರು ಯಾವುದೇ ಕ್ಷೇತ್ರಕ್ಕೆ ಪ್ರವೇಶಿಸಿದರು ತಮ್ಮ ತನವನ್ನು ಎಂದೂ ಬಿಟ್ಟುಕೊಡುವುದಿಲ್ಲ ಎನ್ನುವುದಕ್ಕೆ ಭಾರ್ಗವಿಯವರು ಸಾಕ್ಷಿಯಾಗಿದ್ದಾರೆ.

ಭಾರ್ಗವಿ ನಾರಾಯಣ್ ರಂಗಭೂಮಿಯಲ್ಲಿ ಇಷ್ಟು ವರ್ಷಗಳ ಕಾಲ ಸೇವೆ ಸಲ್ಲಿಸಿರುವುದು ಅಚ್ಚರಿಯ ಸಂಗತಿಯಾಗಿದೆ. ಇವರ ಪತಿಯಾದ ನಾರಾಯಣ್ ಮೂಲತಃ ರಂಗಭೂಮಿ ಕ್ಷೇತ್ರದವರೇ ಆಗಿದ್ದರಿಂದ ಅವರಲ್ಲಿ ಈ ಮಡಿಯ ಪ್ರಜ್ಞೆ ಇರಲಿಲ್ಲ ಎಂದೆನಿಸುತ್ತದೆ. ಆ ಕಾರಣದಿಂದಲೇ ಭಾರ್ಗವಿಯವರ ನಾಟಕ ರಂಗದ ಸುದೀರ್ಘ ಪಯಣ ಇಷ್ಟು ಕಾಲದವರೆಗೂ ಬೆಳೆದು ಕೊಂಡು ಬಂದಿದೆ. ಗಂಡ-ಹೆಂಡತಿ ಒಂದೇ ಕ್ಷೇತ್ರದಲ್ಲಿದ್ದರೂ ಸಹ ತಮ್ಮೊಳಗೆ ಏಳುವ ಪೈಪೋಟಿಗಳನ್ನು ಮೀರಿ ನಿಂತಿದ್ದಾರೆ. ಇದಕ್ಕೆ ಕಾರಣ ಅವರಿಬ್ಬರಲ್ಲಿರುವ ಪರಸ್ಪರ ಹೊಂದಾಣಿಕೆ. ಬಾಲ್ಯದಲ್ಲೇ ಅಕ್ಕ-ಪಕ್ಕದ ಮನೆಯವರ ಮುಂದೆ ಕುವೆಂಪುರವರ ನಾಟಕಗಳನ್ನು ನಿರ್ದೇಶಿಸಿ ಸತತವಾಗಿ ಒಂದು ಗಂಟೆಯವರೆಗೂ ನಟಿಸಿ ಸೈ ಎನಿಸಿಕೊಳ್ಳುತ್ತಿದ್ದ ಭಾರ್ಗವಿಯವರಿಗೆ ಅವರ ಚಪ್ಪಾಳೆಗಳೇ ಪ್ರೋತ್ಸಾಹ ಎನಿಸಿದವು. ಮುಂದೆ ಶಾಲಾ ಕಾಲೇಜು ರಂಗವೇ ಆಕೆಯ ನಾಟಕದ ಅಭಿರುಚಿಯನ್ನು ಮತ್ತಷ್ಟು ಹೆಚ್ಚಿಸಲು ಕಾರಣವಾಯಿತು. ಅಂದಿನ ಆ ಹವ್ಯಾಸ ಸರ್ಕಾರಿ ವೃತ್ತಿಯನ್ನು ಬಿಟ್ಟುಬಂದ ಮೇಲೂ ಭಾರ್ಗವಿಯವರನ್ನು ಸೆಳೆದು ಇಂದು ಆಕೆಯ ಬದುಕಿನ ಪೂರ್ಣವೃತ್ತಿಯಾಗಿದೆ.

೧೯೫೦ರಲ್ಲಿ ಎಸ್.ಎಸ್.ಎಲ್.ಸಿ, ೧೯೫೪ರಲ್ಲಿ ವಿಜಯ ಕಾಲೇಜಿನಲ್ಲಿ ಇಂಟರ್ ಮಿಡಿಯೇಟ್, ೧೯೫೭ರಲ್ಲಿ ಮಹಾರಾಣಿ ಕಾಲೇಜಿನಲ್ಲಿ ಬಿ.ಎಸ್.ಸಿ ಪದವಿ, ೧೯೫೮ರಲ್ಲಿ ನಾಣಿಯವರೊಂದಿಗೆ ಮದುವೆ, ೧೯೫೯ರಲ್ಲಿ ಎಫ್.ಡಿ.ಎ ಆಗಿ ನೇಮಕ, ೧೯೬೬ರಲ್ಲಿ ಬನಶಂಕರಿಯಲ್ಲಿ ಒಂದು ಸುಂದರವಾದ ಮಹಡಿ ಮನೆ ಹೀಗೆ ಒಂದೇ ದಶಕದಲ್ಲಿ ಭಾರ್ಗವಿಯವರ ಬದುಕು ಹಲವು ತಿರುವುಗಳನ್ನು ಪಡೆದುಕೊಂಡಿತು.

'ಕೌಟುಂಬಿಕ ವ್ಯವಸ್ಥೆಯ ಮೇಲೆ ನಂಬಿಕೆ ವಿಶ್ವಾಸವಿರುವ ಲೇಖಕಿ, ಕೌಟುಂಬಿಕ ಬದುಕಿನ ತಳಪಾಯವಾಗಿರುವ ಗಂಡು-ಹೆಣ್ಣಿನ ಸೌಹಾರ್ದ ಸಂಬಂಧವನ್ನು ತಮ್ಮ ಜೀವನದ ಆಧಾರವನ್ನಾಗಿರಿಸಿಕೊಂಡಿದ್ದಾರೆ. ಈ ಆಧಾರದ ಮೇಲೆಯೇ ಹೊರಗಿನ ನಾಟಕ ಕ್ಷೇತ್ರವಲ್ಲೂ ಆಕೆ ಸಫಲತೆಯನ್ನು ಪಡೆದಿರುವುದನ್ನು ಈ ಕಥನ ಹೇಳುತ್ತಿದೆ. ಬಿ.ಎಸ್.ಸಿ. ಪದವಿ ಪಡೆದಿರುವ

ಈಕೆ ಬರೀ ಇಂಟರ್‌ಮೀಡಿಯೇಟ್ ಓದಿರುವ, ಕಿರ್ಲೋಸ್ಕರ್‌ನಲ್ಲಿ ಯಾವುದೋ ಒಂದು ಸಣ್ಣ ಕೆಲಸ ಮಾಡುತ್ತಿರುವ, ಆಸ್ತಿ, ಪಾಸ್ತಿ ಇಲ್ಲದ, ಅರ್ಧಕ್ಕಿಂತ ಹೆಚ್ಚು ಬಿಳಿ ಕೂದಲಿನ ತಲೆಯಿರುವ, ತೆಲುಗು ಮಾತನಾಡುವ ಮುಲುಕನಾಡು ಜನಗಳ ಸಮುದಾಯದ ನಾಣಿಯನ್ನು ಮದುವೆಯಾಗುತ್ತಾರೆ. ತಮ್ಮ ೭ನೇ ವಯಸ್ಸಿಗೇ ತಂದೆಯನ್ನು ಕಳೆದುಕೊಂಡ ಈಕೆಗೆ ಹಾಗೂ ಈಕೆಯ ತಾಯಿಗೆ ಒಂದು ಸುರಕ್ಷಿತವಾದ ವಲಯದ ಅಗತ್ಯವಿದ್ದುದರಿಂದಲೇ ನಾಣಿಯವರನ್ನು ಮದುವೆಯಾಗಲು ಒಪ್ಪಿರಬಹುದು. ೧೯೫೦ರ ದಶಕದಲ್ಲೇ ಪ್ರೇಮವಿವಾಹವಾಗಿರುವುದೇ ಈ ಕುಟುಂಬದ ಒಂದು ದೊಡ್ಡ ಬದಲಾವಣೆ.

'ರವಿಕಲಾವಿದರ' ತಂಡದೊಂದಿಗೆ ನಾಟಕಗಳಲ್ಲಿ ಅಭಿನಯಿಸಲು ಭಾರ್ಗವಿಯವರನ್ನು ಶ್ರೀನಾಥ ಕರೆಯಲು ಬಂದಾಗ ಭಾರ್ಗವಿಯವರ ತಾಯಿ ಹೇಳಿದ ಮಾತು "ಸರಿ ಹೋಗು. ಆದರೆ ಈಗಲೇ ಹೇಳ್ತಾ ಇದ್ದೀನಿ ಭಾರ್ಗವಿ, ನೀನು ಏನು ಮಾಡಿದರೂ ಸರಿ. ಆದರೆ ನಿಂಗಾಗಲೀ, ಮನೆ ತನಕ್ಕಾಗಲಿ, ಕೆಟ್ಟ ಹೆಸರು ತರೋಂತಹ ಯಾವ ಕೆಲಸಾನೂ ಮಾಡಬಾರದು"[೩೩] ಎಂದಿದ್ದರು. ತಾಯಿ ನಾಟಕವಾಡಲು ಕುಮ್ಮಕ್ಕು ಕೊಟ್ಟಿದ್ದು ಅಸಾಧ್ಯದ ಅಚ್ಚರಿಯ ಅಪರೂಪದ ವಿಷಯ ಎಂದಿದ್ದಾರೆ ಭಾರ್ಗವಿ. **ಪಿತೃಪ್ರಧಾನತೆಯ ಕೌಟುಂಬಿಕ ಪರಿಸರದ ಎಲ್ಲಾ ಜವಾಬ್ದಾರಿಗಳನ್ನು ನಿರ್ವಹಣೆಯ ಜಾಣತನ ಭಾರ್ಗವಿಯರಲ್ಲಿ ಕಂಡುಬರುತ್ತದೆ. ತನ್ನ ತನವನ್ನೂ ಬಿಡದೇ ಇತ್ತ ತನ್ನ ಕುಟುಂಬದ ವ್ಯವಸ್ಥೆಗೂ ಯಾವ ಧಕ್ಕೆಯೂ ಆಗದಂತೆ ನಿರ್ವಹಿಸಿಕೊಂಡು ಭಾರ್ಗವಿ ಹೋಗಿರುವುದೇ ಆಕೆಯ ಯಶಸ್ಸಿನ ಗುಟ್ಟಾಗಿದೆ ಎಂದು ಹೇಳಬಹುದು.**

ಬಿ.ಎಸ್ಸಿ. ಓದುತ್ತಿದ್ದಾಗ ತನ್ನ ಸ್ನೇಹಿತೆಯರೊಂದಿಗೆ 'ತಾಳಿಕಟ್ಟೋಕ್ಕೂಲೀನೇ' ನಾಟಕ ಆಡಿದರು ಭಾರ್ಗವಿ. ಈಕೆ ನರಸಿಂಹಯ್ಯನ ಪಾತ್ರವಹಿಸಿದ್ದರು. ಈ ನಾಟಕದ ಕೊನೆಯ ದೃಶ್ಯದಲ್ಲಿ ನರಸಿಂಹಯ್ಯ ಮಾಮಲೇದಾರ್ ರಾಮಣ್ಣನನ್ನು ಚಪ್ಪಲಿಯಿಂದ ಹೊಡೆಯುವ ದೃಶ್ಯವಿದೆ. ಆ ಸನ್ನಿವೇಶಕ್ಕೆ ಭಾರ್ಗವಿ ರಟ್ಟಿನಿಂದ ಚಪ್ಪಲಿ ಮಾಡಿ ಅದನ್ನು ರಂಗದ ಮೇಲೆ ಬಳಸಿದ್ದರು. ಆದರೂ ಅದನ್ನು ಪ್ರಾಂಶುಪಾಲರಿಗೆ ರಂಗದ ಮೇಲೆ ಚಪ್ಪಲಿ ಪ್ರಯೋಗ ಮಾಡಿದ್ದು ಬೇಸರವಾಯಿತು. ಆದರೆ ಇಂದು ರಂಗದ ಮೇಲೆ ಎಲ್ಲ ಬಗೆಯ ವಸ್ತುಗಳೂ ಪ್ರಯೋಗವಾಗುತ್ತಿದೆ. ರಟ್ಟಿನ ಚಪ್ಪಲಿ ಬಳಸಿದ್ದು ಭಾರ್ಗವಿಯವರಲ್ಲಿ ಇರುವ ನಾಟಕದ ರಂಗ ಪರಿಕರಗಳ ಬಗೆಗಿನ ಪ್ರಜ್ಞೆಯನ್ನು ತಿಳಿಸುತ್ತದೆ. ಜೊತೆಗೆ ಇಂದಿಗೂ ಅಂತಹ ದೊಡ್ಡ

---

೩೩. ನಾನು, ಭಾರ್ಗವಿ: ಭಾರ್ಗವಿ ನಾರಾಯಣ್; ಪುಟ-೯೦

ನಾಟಕವನ್ನು ಅಷ್ಟು ಸಲೀಸಾಗಿ ಯಾರೂ ನಿರ್ವಹಿಸುವುದಿಲ್ಲ ಎಂಬುದನ್ನು ಭಾರ್ಗವಿ ತಿಳಿಸುತ್ತಾ ಆ ನಾಟಕವನ್ನು ಆಡುವ ಧೈರ್ಯ ಮಾಡಿದ್ದು ಬರೀ ಹುಡುಗಿಯರೇ ಎಂದೂ ಬೀಗುತ್ತಾರೆ. ಅಂದರೆ ಈಕೆಯ ವ್ಯಕ್ತಿತ್ವದಲ್ಲಿ ಆಧುನಿಕ ಸಾಮಾಜಿಕ ವ್ಯವಸ್ಥೆ ಕೊಟ್ಟಿರುವ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ತನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಈಕೆ ಬಳಸಿಕೊಳ್ಳುತ್ತಾ ಹೆಜ್ಜೆ ಹಾಕಿರುವುದನ್ನು ನೋಡಬಹುದು.

'ಹೋಂರೂಲು' ನಾಟಕ ಪ್ರದರ್ಶನಗೊಳ್ಳುವ ಒಂದು ಗಂಟೆಗೆ ಮೊದಲು ನಾಟಕದ ಮೊದಲ ಸನ್ನಿವೇಶದಲ್ಲಿ ನಟಿಸಬೇಕಾದ ಸ್ನೇಹಿತೆ ಮನೆಯವರು ಮಡಿವಂತ ಪ್ರಜ್ಞೆಯಿಂದ ಆಕೆಯನ್ನು ನಟಿಸಲು ಕಳುಹಿಸದೇ ಹೋದಾಗ ನಾಟಕದ ನಿರ್ದೇಶಕಿಯಾದ ಭಾರ್ಗವಿ ಗಾಬರಿಯಾಗಿ ದಿಕ್ಕು ತೋಚದೇ ಕಂಗಾಲಾಗುತ್ತಾರೆ. ಆಗ ಅಲ್ಲಿನ ಕಲಾವಿದರಿಗೆ ಮೇಕಪ್ ಮಾಡಲು ಬಂದಿದ್ದ ನಾಣಿ ನಾಟಕ ಹಾಳಾಗಬಾರದೆಂಬ ಒಂದೇ ಕಾರಣಕ್ಕೆ ತಮ್ಮ ಆಪ್ತ ಸ್ನೇಹಿತನಾದ ಪದ್ಮನಾಭನನ್ನು ಕರೆಸಿ ಆ ಪಾತ್ರ ನಿರ್ವಹಿಸಲು ಹೇಳಿದರು. ಬೇರೆ ದಾರಿ ಇಲ್ಲದೇ ಭಾರ್ಗವಿಯವರೂ ಒಪ್ಪಿಕೊಂಡರು. ಸ್ತ್ರೀ ಪಾತ್ರದಲ್ಲಿದ್ದ ಪದ್ಮನಾಭ ಬಹಳ ಚೆನ್ನಾಗಿಯೇ ಅಭಿನಯಿಸಿದರು. ಕೊನೆಗೆ ನಾಟಕವೂ ಯಶಸ್ವಿಯಾಗಿ ಮೂಡಿ ಬಂದಿತು.

ಆದರೆ ಕಾಲೇಜಿನ ಪ್ರಾಂಶುಪಾಲರಿಗೆ ಪದ್ಮನಾಭನ ಧ್ವನಿಯಿಂದ ಆ ಪಾತ್ರ ನಿರ್ವಹಿಸಿದವರು ಗಂಡು ಹುಡುಗ ಎಂದು ಗೊತ್ತಾಯಿತು. ನಾಟಕ ಮುಗಿದ ತಕ್ಷಣ ಗ್ರೀನ್ ರೂಂಗೆ ಬಂದು "ನೀವು ಯಾರ ಪರ್ಮಿಷನ್ ತಗೊಂಡು ಈ ರೀತಿ ಮಾಡಿದಿರಿ"[೩೪] ಅಂತ ಚೆನ್ನಾಗಿ ಬೈದರು. ಅಂದು ಹೆಣ್ಣು-ಗಂಡು ಸೇರಿ ನಾಟಕವನ್ನು ಮಾಡುವಂತಿರಲಿಲ್ಲ. ಇದು ಪಿತೃಪ್ರಧಾನತೆಯ ನಿಯಮವಾಗಿತ್ತು. 'ಹೋಂರೂಲು' ನಾಟಕ ಭಾರ್ಗವಿ ಹಾಗೂ ನಾಣಿಯವರ ಸಮಯ ಪ್ರಜ್ಞೆಯಿಂದ ಯಶಸ್ವಿಯಾಗಿ ಪ್ರದರ್ಶನಗೊಂಡರೂ ಹೊಗಳಿಕೆಗೆ ಭಾರ್ಗವಿ ಪಾತ್ರರಾಗಲಿಲ್ಲ.

ಭಾರ್ಗವಿ ವಿಜಯಾ ಕಾಲೇಜ್‌ಅನ್ನು ಸೇರಿದ ಮೊದಲ ವರ್ಷದಲ್ಲಿ 'ಕ್ಷೀರ ಸಾಗರ' ನಾಟಕವಾಡಿದರೆ, ಎರಡನೇ ವರ್ಷ ಪರ್ವತವಾಣಿಯವರ 'ಸುಂದ್ರೋಪ ಸುಂದ್ರು' ನಾಟಕ ಆಡಿದರು. ಅದೇ ನಾಟಕವನ್ನು ಮುಂದೆ ನ್ಯಾಷನಲ್ ಕಾಲೇಜಿನಲ್ಲಿ ಆಡಿದಾಗ ಸರಸ್ವತಿ ಬಾಯಿ ಪಾತ್ರವನ್ನು ಭಾರ್ಗವಿ ಅದ್ಭುತವಾಗಿ ನಿರ್ವಹಿಸಿದರು. ಈ ನಾಟಕದ ಪುಸ್ತಕ ಮರು

---

೩೪. ನಾನು,ಭಾರ್ಗವಿ;ಪು.ಸಂ-೮೮

೩೫. ಅದೇ: ಪು.ಸಂ-೮೮

ಮುದ್ರಣಗೊಳ್ಳುವ ಸಂದರ್ಭದಲ್ಲಿ ಪರ್ವತವಾಣಿಯವರು ಆ ನಾಟಕದ ಮುನ್ನುಡಿಯಲ್ಲಿ ಹೀಗೆ ಬರೆದಿದ್ದರಂತೆ "ನನ್ನ ಸರಸ್ವತಿ ಬಾಯಿಯ ಪಾತ್ರವನ್ನು ನಿರ್ವಹಿಸಲೆಂದೇ ಜನ್ಮ ತಾಳಿರುವಭಾರ್ಗವಿ"[೩೫] ಎಂದು ತಮ್ಮ ಮೆಚ್ಚುಗೆಯನ್ನು ಭಾರ್ಗವಿಯವರ ನಟನೆಯ ಬಗೆಗೆ ವ್ಯಕ್ತಪಡಿಸಿದ್ದಾರೆ. ನಾಟಕ ಬರೆದ ಲೇಖಕರಿಂದಲೇ ಮೆಚ್ಚುಗೆ ಪಡೆದಿರುವ ಅಭಿನೇತ್ರಿ ಭಾರ್ಗವಿ ನಾರಾಯಣ್.

ರವಿಕಲಾವಿದರ ತಂಡ ಆರಿಸಿಕೊಂಡಿದ್ದ ನಾಟಕ ಆದ್ಯ ರಂಗಚಾರ್ಯರ 'ಕರ್ತಾರನ ಕಮ್ಮಟ' ಅದೇ ಮೊದಲ ಬಾರಿಗೆ ಬೆಂಗಳೂರಿನಲ್ಲಿ ಪ್ರದರ್ಶನಗೊಂಡ ಶ್ರೀರಂಗರ ಮೊದಲ ನಾಟಕ ಇದಾಗಿತ್ತು. ಈ ನಾಟಕದ ಭಾಷೆ ಧಾರವಾಡ ಕನ್ನಡ. ಭಾರ್ಗವಿರವರಿಗೆ ಈ ಭಾಷೆಯ ಧಾಟಿ ಅರ್ಥವಾಗುತ್ತಿರಲಿಲ್ಲವಂತೆ ಆಗ ಬಿ.ಎಸ್.ನಾರಾಯಣ್ ಸಮಾಧಾನದಿಂದ ಪ್ರಾಕ್ಟೀಸ್ ಮಾಡಿಸಿದಾಗ ಆ ನಾಟಕದ ತಲೆ–ಬುಡ ಭಾರ್ಗವಿರವರಿಗೆ ಅರ್ಥವಾಯಿತು. ಅಂತೂ ನಾಟಕ ಅತ್ಯಂತ ಯಶಸ್ವಿಯಾಗಿ ಪ್ರದರ್ಶನವಾಯಿತು. ಹೀಗೆ ಭಾಷೆಯ ಸೊಗಡು ಬೇರೆಯಾದರೂ ಅದನ್ನು ನಿಧಾನವಾಗಿಯಾದರೂ ಕಲಿತು ಅಭಿನಯಿಸಿದ ಕೀರ್ತಿ ಭಾರ್ಗವಿರವರಿಗೇ ಸಲ್ಲುತ್ತದೆ.

'ಉಂಡಾಡಿಗುಂಡ' ನಾಟಕದಲ್ಲಿ ೬ ವರ್ಷದ ತಮ್ಮ ಮಗಳಾದ ಸುಜಾತಳನ್ನು ಮಾತು ಹೆಚ್ಚು ಇರುವ 'ಶಾಂತಿ' ಪಾತ್ರಕ್ಕೆ ನಾಣಿ 'ಬೇಡ ಅವಳಿಗೆ ಕಷ್ಟವಾಗುತ್ತೆ' ಎಂದು ಹೇಳಿದರೂ ಭಾರ್ಗವಿ ಶತಾಯ ಗತಾಯ ಅವಳ ಕೈಲೇ ಆ ಪಾತ್ರವನ್ನು ಮಾಡಿಸುವ ಹಟದಿಂದ ದಿನಾ ಆಕೆಗೆ ಒಂದೊಂದು ಸಾಲುಗಳನ್ನು ಹೇಳಿಕೊಟ್ಟು ಪ್ರಾಕ್ಟೀಸ್ ಮಾಡಿಸುತ್ತಿದ್ದರು. ಸುಜಾತ ಸಹ ಶ್ರದ್ಧೆಯಿಂದ ಕಲಿತುಕೊಂಡಳು. ಇದರ ಫಲವಾಗಿ ಮುಂದೆ ನಾಟಕ ಬಹಳ ಚೆನ್ನಾಗಿ ಮೂಡಿಬಂತು ಎಲ್ಲರ ಮೆಚ್ಚುಗೆಗೂ ಪಾತ್ರವಾಯಿತು. **ಹೀಗೆ ಭಾರ್ಗವಿ ತಮ್ಮ ಇಡೀ ಕುಟುಂಬವನ್ನು ಸಾಂಸ್ಕೃತಿಕ ವಲಯಕ್ಕೆ ತಂದರು ಎಂಬುದರ ಅರಿವಾಗುತ್ತದೆ.**

ಚಿಕ್ಕವಯಸ್ಸಿನವಳು, ಅಚ್ಚು ಕಟ್ಟಾಗಿ ಪಾತ್ರ ನಿರ್ವಹಿಸಿದ್ದರಿಂದ ಸುಜಾತ ಎಲ್ಲರ ಮೆಚ್ಚುಗೆಗೂ ಪಾತ್ರವಾದಳು. ಭಾರ್ಗವಿ, ನಾಣಿಯವರಿಗಿದ್ದ ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ಸುಳ್ಳು ಮಾಡಿದರು. **ಹೀಗೆ ರಂಗದ ಮೇಲೆ ೬ ವರ್ಷದ ಹುಡುಗಿ ಅಷ್ಟು ಸಲೀಸಾಗಿ ಪಾತ್ರ** ನಿರ್ವಹಿಸಲು ಸಾಧ್ಯವಾಗಿದ್ದು. ಅದುವರೆಗೂ ಆ ಪಾತ್ರವನ್ನು ಕಾಲೇಜು ವಿದ್ಯಾರ್ಥಿಗಳು

---

೩೫. ಅದೇ: ಪು.ಸಂ–೮೮

ನಿರ್ವಹಿಸುತ್ತಿದ್ದರು. ಭಾರ್ಗವಿರವರ ತರಬೇತಿಯಿಂದ ಇದೇ ಮೊದಲ ಬಾರಿಗೆ ಆರು ವರ್ಷದ ಮಗು ಅಷ್ಟು ಸಲೀಸಾಗಿ ಪಾತ್ರ ನಿರ್ವಹಿಸಲು ಸಾಧ್ಯವಾದದ್ದು.

ಒಂದೇ ವೃತ್ತಿ ಮಾಡುತ್ತಿದ್ದ, ಆದರ್ಶ ದಂಪತಿಗಳಂತಿದ್ದ ಭಾರ್ಗವಿ ಹಾಗೂ ನಾಣಿ 'ಸ್ಮಶಾನ ಕುರುಕ್ಷೇತ್ರ' ನಾಟಕವನ್ನು ಕೈಗೆತ್ತಿಕೊಂಡರು. ಈ ನಾಟಕದ ರಂಗ ಸಜ್ಜಿಕೆ, ವೇಷ ಭೂಷಣಗಳು, ಭಾಷೆ ಎಲ್ಲವೂ ಕ್ಲಿಷ್ಟವಾದುದು. ಆದರೆ ಅದನ್ನೊಂದು ಸವಾಲಿನಂತೆ ಸ್ವೀಕರಿಸಿದ ದಂಪತಿಗಳು ಆ ನಾಟಕದ ಪ್ರದರ್ಶನಕ್ಕಾಗಿ ಒಳ್ಳೆಯ ಹುಮ್ಮಸ್ಸಿನಿಂದ ತಾಲೀಮು ನಡೆಸಲು ಮುಂದಾದರು. ಅದರ ಪ್ರತಿಫಲವಾಗಿ ನಾಟಕ ಅತ್ಯುತ್ತಮವಾಗಿ ಮೂಡಿ ಬಂದು ಎಲ್ಲರ ಹೊಗಳಿಕೆಯ ಸುರಿಮಳೆಗೂ ಪಾತ್ರವಾದರು. ಆ ನಾಟಕವನ್ನು ಎಚ್ಕೆ.ರಂಗನಾಥ್ 'ಅತ್ಯುತ್ತಮ ಪ್ರದರ್ಶನ' ಎಂದು ತಮ್ಮ ಅಭಿನಂದನೆಗಳನ್ನು ತಿಳಿಸಿದ್ದಲ್ಲದೆ ಪತ್ರಿಕೆಯಲ್ಲೂ ಹೊಗಳಿ ಬರೆದಿದ್ದರು.

ಈ ಕುರುಕ್ಷೇತ್ರ ನಾಟಕಕ್ಕೆ ಉತ್ತಮ ಬೆಳಕನ್ನು ನೀಡಿದವರು ನಾಣಿ ಎಂದು ಎಲ್ಲರೂ ಹೊಗಳಿದರು. ಇಷ್ಟೆಲ್ಲಾ ಕಲೆಯನ್ನು ತನ್ನಲ್ಲಿ ಕರಗತ ಮಾಡಿಕೊಂಡಿರುವ ತಮ್ಮ ಪತಿಯಾದ ನಾಣಿಯವರ ಬಗ್ಗೆ ಭಾರ್ಗವಿ ತಮ್ಮ ಆತ್ಮಕಥನದೊಳಗೆ ಹೀಗೆ ಹೇಳಿಕೊಂಡಿದ್ದಾರೆ:–
"ನಾಣಿಯವರು ಸ್ವತ: ಒಳ್ಳೆಯ ನಟರಾದರೂ ತಾವು ನಾಟಕದಲ್ಲಿ ಭಾಗವಹಿಸುವುದಕ್ಕಿಂತ ಬೆಳಕು, ರಂಗಸಜ್ಜಿಕೆ, ವರ್ಣಾಲಂಕಾರ ರಂಗದಲ್ಲಿ ಹೆಚ್ಚು ಕ್ರಿಯಾಶೀಲರು. ನುಡಿದಂತೆ ನಡೆಯುವ ಪ್ರವೃತ್ತಿ ಅವರದು."[೩೬]

"ನನಗೆ ನಾಟಕದ ಹುಚ್ಚು ಹತ್ತು ವರ್ಷದಲ್ಲಿ ಹುಟ್ಟಿದ್ದು ಎಪ್ಪತ್ತಾದರೂ ಬಿಡದೆ ಅಂಟಿಕೊಂಡಿತು"[೩೭]ಎಂದು ಆತ್ಮಕಥನದ ಒಳಗೆ ಹೇಳುವುದರ ಜೊತೆಗೆ ಅದಕ್ಕೊಂದು ಸನ್ನಿವೇಶವನ್ನೂ ಪ್ರಸ್ತಾಪಿಸಿದ್ದಾರೆ.

ಎಂ.ಎನ್. ಶ್ರೀನಿವಾಸ್‌ರವರು ನಿರ್ದೇಶಿಸುತ್ತಿದ್ದ "ಚಾಕೋಲೇಟ್ ಸಿಪಾಯಿ" ನಾಟಕದ ರಿಹರ್ಸಲ್ ಮಾಡುವಾಗ ಭಾರ್ಗವಿಯವರ ಸೋದರ ಮಾವ ತಿರುಚಿನಾಪಳ್ಳಿಯಲ್ಲಿ ನಿಧನರಾದರು ಎಂಬ ಸುದ್ದಿ ಬಂದಿತು. ಆದರೆ ಮಾವ ಹೋದ ೯ನೇ ದಿನಕ್ಕೆ ಈ ನಾಟಕವನ್ನು ಆಡಬೇಕಿತ್ತು. ಗಂಡ ಸತ್ತ ಭಾರ್ಗವಿಯವರ ಸೋದರತ್ತೆಯನ್ನು ಮಾವ ಹೋದ

---

೩೬. ಅದೇ:ಪು.ಸಂ–೧೮೪

೩೭. ಅದೇ: ಪು.ಸಂ–೬೪

ಹತ್ತು ದಿನದೊಳಗೇ ನೋಡಬೇಕಿತ್ತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ನಾಟಕವನ್ನು ಕೈ ಬಿಡದೇ ರವೀಂದ್ರ ಕಲಾಕ್ಷೇತ್ರದಲ್ಲಿ ಆ ನಾಟಕವನ್ನು ಆಡಿ ಮುಗಿಸಿ ರಾತ್ರಿ ೮.೩೦ರ ರೈಲನ್ನು ಹತ್ತಲು ಭಾರ್ಗವಿ ರೈಲ್ವೆ ಸ್ಟೇಷನ್ನಗೆ ಓಡಿದ ರೀತಿ, ಅಲ್ಲಿ ಪರದಾಡಿದ ರೀತಿಯನ್ನು ಹೇಳುವಾಗ ಭಾರ್ಗವಿರವರಿಗೆ ನಾಟಕದ ಮೇಲಿರುವ ಪ್ರೀತಿ ಹಾಗೂ ಕುಟುಂಬದ ಚೌಕಟ್ಟಿನೊಳಗಿರುವ ಒಪ್ಪಂದ ಇವರೆಡಕ್ಕೂ ಧಕ್ಕೆ ಬಾರದ ರೀತಿ ಆಕೆ ನಡೆದುಕೊಂಡಿರುವ ಬಗೆಯನ್ನು ನೋಡಬಹುದಾಗಿದೆ.

ನಾಟಕ ಅಥವಾ ಧಾರಾವಾಹಿಗಳಲ್ಲಿ ಮಾತುಗಳು, ಮೂವ್‌ಮೆಂಟುಗಳು ತಪ್ಪಿ, ನಿರ್ದೇಶಕರಿಂದ ಬೈಸಿಕೊಂಡರೂ ಆ ನಾಟಕಗಳ ರಿಹರ್ಸಲ್‌ಗಳು ಭಾರ್ಗವಿರವರಿಗೆ ಬಹಳ ಖುಷಿಕೊಡುತ್ತಿದ್ದವೆಂದು 'ಬಹದ್ದೂರ್ ಗಂಡ' ನಾಟಕ ಆಡುವಾಗ, 'ಮುಕ್ತ' ಧಾರಾವಾಹಿಯ ಸಂದರ್ಭದಲ್ಲಿ, 'ಅಜ್ಜಿ–ಆಸ್ತಿ' ನಾಟಕದ ಕೆಲವು ಸನ್ನಿವೇಶಗಳಲ್ಲಿ ಆದಂತಹ ತಪ್ಪು ಡೈಲಾಗ್‌ಗಳಿಂದ ಆಗುತ್ತಿದ್ದ ತಮಾಷೆಯ ಸಂದರ್ಭಗಳನ್ನು ಪ್ರಸ್ತಾಪಿಸಿದ್ದಾರೆ.

**ಭಾರ್ಗವಿ ತನ್ನ ಸಾಂಸಾರಿಕ ಬದುಕಿಗೆ ಯಾವುದೇ ಧಕ್ಕೆ ಉಂಟಾಗದಂತೆ ತನ್ನ ವೈಯಕ್ತಿಕ ವ್ಯಕ್ತಿತ್ವವನ್ನು ಎಲ್ಲೂ ಯಾವುದೇ ಕಾರಣಕ್ಕೂ ಹೊಂದಾಣಿಕೆ ಮಾಡಿಕೊಳ್ಳುವಂತೆ ಸಾಮಾಜಿಕ ವಲಯದಲ್ಲಿ ನಿರಂತರವಾಗಿ ಭಾಗವಹಿಸುತ್ತಲೇ ಯಶಸ್ವಿಯಾಗಿರುವ ಹೆಣ್ಣಿನ ಕಥಾನಕವೊಂದನ್ನು ತಮ್ಮ ಆತ್ಮಕಥನದ ಒಳಗೆ ಹೇಳುತ್ತಿದ್ದು ಆ ಮೂಲಕ ಬಲಿಪಶುತ್ವದ ಕಥನವನ್ನು ಈ ಕಥನ ಮೀರಿ ನಿಂತಿದೆ ಎಂಬುದನ್ನು ಮುಂದಿನ ಸನ್ನಿವೇಶ ತಿಳಿಸುತ್ತದೆ.**

ತಮ್ಮ ಮಗನೇ ನಿರ್ದೇಶಿಸುತ್ತಿದ್ದ ನಾಟಕದ ಮೊದಲ ಪ್ರದರ್ಶನ ಇದ್ದುದು ಯುಗಾದಿ ಹಬ್ಬದಂದು 'ಸುಚಿತ್ರಾ'ದ ಪೀರ್ ರಂಗಸ್ಥಳದಲ್ಲಿ ಸ್ಟೇಜ್ ರಿಹರ್ಸಲ್ ಇಟ್ಟುಕೊಂಡಿದ್ದ ಪ್ರಕಾರ ಅದು ಬೆಳ್ಳಿಗ್ಗೆ ೯ಗಂಟೆಗೆ. ಆದರೆ ಭಾರ್ಗವಿಯವರ ಅತ್ತೆಗೆ ಸಹಜವಾಗೇ ಕೋಪ ಬಂದು ಹಬ್ಬದ ದಿನವಾದರೂ ಲಕ್ಷಣವಾಗಿ ಮನೆಯಲ್ಲಿದ್ದು ಅಡುಗೆ ಮಾಡು ಎಲ್ಲೂ ಹೋಗಬೇಡ ಮನೆಯಲ್ಲಿಯೇ ಇರು ಎಂದು ಹೇಳಿದರು. ಆದರೆ ತಲೆಕೆಡಿಸಿಕೊಳ್ಳದ ಭಾರ್ಗವಿ ಬೆಳಗಿನ ಜಾವ ೩ ಗಂಟೆಗೇ ಎದ್ದು ಸದ್ದಿಲ್ಲದೆ ಮನೆ ಮುಂದೆ ರಂಗೋಲಿ ಹಾಕಿ, ಹಬ್ಬದ ಎಲ್ಲಾ ಬಗೆಯ ಅಡುಗೆಯನ್ನು ಮಾಡಿ ಮುಂದಿನ ಕೆಲಸವನ್ನು ಅತ್ತೆಯವರಿಗೆ ವಹಿಸಿಕೊಟ್ಟು ರಿಹರ್ಸಲ್‌ಗೆ ಹೊರಟರು.

ಈ ಸನ್ನಿವೇಶವನ್ನು ಓದುವಾಗ ಕಲಾವಿದೆಯಾದ ಭಾರ್ಗವಿಯೊಳಗಿರುವ 'ಸಂಪ್ರದಾಯ ಕುಟುಂಬದ ಹೆಣ್ಣಿನ ಜವಾದ್ದಾರಿ' ಏನು ಮತ್ತು ಎಷ್ಟು ಎಂದು ಅರ್ಥವಾಗುತ್ತದೆ.

"Traditionalism goes hand-in-hand with modernization"[38] ಪಿತೃಪ್ರಧಾನ ವ್ಯವಸ್ಥೆಗೆ ಭಾರ್ಗವಿ ನೇರವಾಗಿ ಎಲ್ಲೂ ಡಿಕ್ಕಿ ಹೊಡೆಯುವುದಕ್ಕೆ ಹೋಗುವುದೇಇಲ್ಲ. ಸಮತೋಲನವನ್ನು ಜೀವನದ ಉದ್ದಕ್ಕೂ ಕಾದುಕೊಂಡು ಹೋಗಿದ್ದಾರೆ ಎಂಬುದಕ್ಕೆ ಅತ್ತೆ ಹಾಗೂ ಸೊಸೆಯ ನಡುವೆ ನಡೆಯುವ ಸನ್ನಿವೇಶ ಸಾಕ್ಷಿಯಾಗಿದೆ.

ಭಾರ್ಗವಿಯವರೊಡನೆ ನಾಟಕಗಳನ್ನು ಮಾಡುತ್ತಿದ್ದ ಎಸ್.ಸೀತಾರಾಂ ಕಟ್ಟಿದ 'ಪರಸ್ಪರ' ಎಂಬ ನಾಟಕ ತಂಡದಲ್ಲೂ ಭಾರ್ಗವಿ ಅಭಿನಯಿಸುತ್ತಿದ್ದರು. ಮುಂದೆ ಹೃದಯದ ತೊಂದರೆಯಿಂದ ತೀರಿಕೊಂಡ ಸೀತಾರಾಂರವರ ಸ್ಮರಣಾರ್ಥ 'ಉಂಡಾಡಿ ಗುಂಡ' ನಾಟಕವನ್ನು ಪೀರ್ ರಂಗಸ್ಥಳದಲ್ಲಿ ಭಾರ್ಗವಿಯವರೇ ಆಡಿಸಿದರು. ಆ ನಾಟಕ ಎಲ್ಲರ ಪ್ರಶಂಸೆಗೂ ಪಾತ್ರವಾಯಿತು.

ನಾಣಿ ಭಾರ್ಗವಿಯವರ ಜೀವನದಿಂದ ಕಣ್ಮರೆಯಾದ ಮೇಲೆ ಭಾರ್ಗವಿಯವರಿಗೆ ಸೀತಾರಾಂ ರವರ 'ಮುಕ್ತ' ಧಾರವಾಹಿಗೆ ಕರೆ ಬಂತು ಅದರೊಳಗಿನ 'ಅಜ್ಜಿ' ಪಾತ್ರದಿಂದ ಭಾರ್ಗವಿ ಮತ್ತಷ್ಟು ಜನಪ್ರಿಯವಾದರು. ಸೀತಾರಾಂ ಹೇಳಿದ್ದು 'ಒಂದು ಸಣ್ಣ ಪಾತ್ರ ಇದೆ ಈ ಧಾರಾವಾಹೀಲಿ ನಿಮಗೆ ಇಷ್ಟ ಇದ್ದರೆ ಮಾಡಿ–ಇಲ್ಲದೆ ಹೋದರೆ ಬೇಡಾ' ಅಂತಾನೇ ಹೇಳಿದ್ದರು. 'ಪರವಾಗಿಲ್ಲ ಬಿಡಿ–ಸಣ್ಣ ಪಾತ್ರ ಆದರೇನು ಮಾಡ್ತೀನಿ' ಹೇಗೂ ಬಿಡುವಾಗಿದ್ದೇನಲ್ಲಾ ಎಂದು ಹೇಳಿದರು ಭಾರ್ಗವಿ. ಆ ಧಾರಾವಾಹಿಯೊಳಗಿನ ತಾತ–ಅಜ್ಜಿ ಪಾತ್ರ ಪ್ರೇಕ್ಷಕರೆಲ್ಲರಿಗೂ ಖುಷಿ ಕೊಡುತ್ತಿದ್ದರಿಂದ ಸೀತಾರಾಂ ಆ ಪಾತ್ರವನ್ನು ಮತ್ತಷ್ಟು ಬೆಳೆಸಿದರು. ಮುಂದೆ 'ಮುಕ್ತ ಅಜ್ಜಿ' ಎನ್ನುವಷ್ಟು ಪ್ರಸಿದ್ಧವಾಗಿ ಬಿಟ್ಟರು ಭಾರ್ಗವಿ.

ಹೀಗೆ ಚಿಕ್ಕ ಪಾತ್ರದಲ್ಲೇ ದೊಡ್ಡ ಪ್ರಮಾಣದ ಅಭಿನಯವನ್ನು ಮಾಡುವ ಹಾಗೂ ಪಾತ್ರಕ್ಕೆ ತುಂಬುವ ನ್ಯಾಯದಿಂದ ಭಾರ್ಗವಿಯವರು ಕಿರುತೆರೆಯಲ್ಲಿ ತಮ್ಮ ಕಲಾಸೇವೆಯನ್ನು ಸದಾ ಚೈತನ್ಯ ಶೀಲ ಪ್ರವೃತ್ತಿಯಿಂದ ಇಂದಿಗೂ ಸೇವೆ ಸಲ್ಲಿಸುತ್ತಿದ್ದಾರೆ. ಈ ವಯಸ್ಸಿನಲ್ಲೂ ಕಲೆಗಾಗಿ ತಮ್ಮ ಬದುಕನ್ನು ಮೀಸಲಾಗಿಟ್ಟಿದ್ದಾರೆ. ಹೀಗೆ ಭಾರ್ಗವಿ ತಮ್ಮ ಕುಟುಂಬದ ಒಳಗೆ ಕಂಡುಕೊಳ್ಳುವ ಅಸ್ಮಿತೆ ಹಾಗೂ ನಾಟಕ ರಂಗದಲ್ಲಿ ತಮ್ಮ ಪ್ರತಿನಿಧಿಕರಣವನ್ನು ಇಂದಿಗೂ ಕಾದಿರಿಸಿಕೊಂಡಿದ್ದಾರೆ.

---

೩೮.Modernity, postmodernity and neo-sociological theories - S.L.Doshi- p. no-52

‘ನಾಟಕ ರಂಗದಲ್ಲಿ ಹೆಣ್ಣಿನ ಪ್ರತಿನಿಧೀಕರಣದ ಸ್ವರೂಪ’ – ಈ ಅಧ್ಯಾಯದ ಗ್ರಹೀತಗಳು :

೧. "Traditionalism goes hand-in-hand with modernization" ಈ ಹೇಳಿಕೆಯ ವಿವರಣೆಯನ್ನು ಈ ಅಧ್ಯಾಯದಲ್ಲಿ ನೋಡಲಾಗಿದೆ.

೨. ‘ಹೆಣ್ಣು’ ನಾಟಕ ರಂಗದಲ್ಲಿ ಯಾವ ಬಗೆಯ ಸಮಸ್ಯೆಗಳನ್ನು ಹಾಗೂ ಸವಾಲುಗಳನ್ನು ಎದುರಿಸಬೇಕಾಗುತ್ತದೆ ಎಂಬುದರ ವಿವರ ಈ ಅಧ್ಯಾಯದಲ್ಲಿದೆ.

೩. ಪರಂಪರೆ, ಸಂಪ್ರದಾಯ, ಪಿತೃಪ್ರಧಾನತೆ ಮುಂತಾದ ಮೌಲ್ಯಗಳಿಗೆ ಎಲ್ಲೂ ನೇರವಾಗಿ ಡಿಕ್ಕಿ ಹೊಡೆಯದೇ ಎಲ್ಲವನ್ನೂ ಸರಿದೂಗಿಸಿಕೊಂದು ಹೋಗಿರುವ ಜಾಣತನವನ್ನು ಇಲ್ಲಿ ಕಾಣಬಹುದು.

೪. ಪಿತೃಪ್ರಧಾನತೆಯ ಕೌಟುಂಬಿಕ ಪರಿಸರದೊಳಗೆ ತನ್ನತನವನ್ನು ಬಿಡದೆ, ಕುಟುಂಬದ ವ್ಯವಸ್ಥೆಗೂ ಧಕ್ಕೆ ಆಗದಂತೆ ಜೀವನ ನಡೆಸಿಕೊಂಡು ಹೋಗುವುದೇ ಯಶಸ್ಸಿನ ಗುಟ್ಟು ಎಂಬುದನ್ನು ಈ ಕಥನ ಹೇಳುತ್ತಿದೆ.

೫. ಆಧುನಿಕ ಸಾಮಾಜಿಕ ವ್ಯವಸ್ಥೆಕೊಟ್ಟಿರುವ ಸ್ವಾತಂತ್ರ ಮತ್ತು ಸಮಾನತೆಯನ್ನು ತನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಭಾರ್ಗವಿ ಬಳಸಿಕೊಂಡು ಹೆಜ್ಜೆ ಹಾಕಿರುವುದನ್ನು ಇಲ್ಲಿ ನೋಡಬಹುದು.

೬. ಸಾಂಪ್ರದಾಯಿಕ ಪರಿಸರದಲ್ಲಿರುವ ಸವಾಲುಗಳೇನು? ಅದನ್ನು ಹೆಣ್ಣು ನಿಭಾಯಿಸಬೇಕಿರುವ ಬಗೆ ಎಂತಹದು? ಎಂಬುದನ್ನು ಇಲ್ಲಿ ಹೇಳಲಾಗಿದೆ.

೭. ಈ ಆತ್ಮಕಥನ ತನ್ನತನವನ್ನು ಎಲ್ಲೂ ಬಿಟ್ಟುಕೊಡದೆ ಸಾಮಾಜಿಕ ವಲಯದಲ್ಲಿ ನಿರಂತರವಾಗಿ ಭಾಗವಹಿಸುತ್ತಲೇ ಯಶಸ್ವಿಯಾಗಿರುವ ಹೆಣ್ಣಿನ ಕಥಾನಕವಾಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ಗ್ರಹಿಸಲಾಗಿದೆ.

# ಅಧ್ಯಾಯ-೪

## ಪ್ರತಿಭಾ ನಂದಕುಮಾರ್ ಹಾಗೂ ಭಾರ್ಗವಿ ನಾರಾಯಣ್ : ಆಧುನಿಕತೆಯ ಎರಡು ಮುಖಗಳು

ಭಾರತದ ಪುನರುಜ್ಜೀವನದ ಕಾಲಘಟ್ಟವನ್ನು ಆಧುನಿಕ ಕಾಲಘಟ್ಟವೆಂದು ಗುರುತಿಸುತ್ತಾರೆ. ಇದು ವಸಾಹತು ಆಳ್ವಿಕೆಯ ಅವಧಿಯಲ್ಲಿ ಬಂದದ್ದು. ಆಧುನಿಕ ಕಾಲಘಟ್ಟ ಆರ್ಥಿಕ, ಸಾಮಾಜಿಕ, ರಾಜಕೀಯ ವ್ಯವಸ್ಥೆಯಲ್ಲಿನ ಪಲ್ಲಟಗಳನ್ನು ಸೂಚಿಸುತ್ತದೆ. ಹೀಗೆ ಆರ್ಥಿಕ, ಸಾಮಾಜಿಕ, ರಾಜಕೀಯ ಪಲ್ಲಟಗಳು ಉಂಟಾದಂತೆ ಸಮಾಜದ ಪಾರಂಪಾರಿಕ ಮೌಲ್ಯಗಳಲ್ಲೂ ಪಲ್ಲಟ ಉಂಟಾಗುತ್ತದೆ. ಈ ಸಮಯದಲ್ಲಿ ಸ್ವಾತಂತ್ರ್ಯ ಸಮಾನತೆ ಎಂಬ ಮೌಲ್ಯಗಳೂ ಕೂಡ ಭಾರತಕ್ಕೆ ಬಂದವು. ಈ ಕಾಲಘಟ್ಟವನ್ನು ಆಧುನಿಕ ಕಾಲಘಟ್ಟ ಎಂದು ಗುರುತಿಸಲಾಗಿದೆ.[೩೯]



'ಆಧುನಿಕತೆ' ಘಟ್ಟದಲ್ಲಿ ಹಿಂದಿನಿಂದ ಬಂದ ಮೌಲ್ಯಗಳು ಕಾಲದಿಂದ ಕಾಲಕ್ಕೆ ವ್ಯಕ್ತಿಯ ಮಾನಸಿಕ ವಿಕಸನವಾದಂತೆ ತನ್ನ ತನವನ್ನು ಗುರುತಿಸಿಕೊಳ್ಳುವ ಬೇರೆ-ಬೇರೆ ಮೌಲ್ಯಗಳಾಗಿ ರೂಪುಗೊಳ್ಳುತ್ತವೆ. ಆದ್ದರಿಂದ ಈ ಆಧುನಿಕ ಪರಿಸರದೊಳಗೆ ಭಿನ್ನ-ಭಿನ್ನವಾದ ವೈಯಕ್ತಿಕತೆಯ ವ್ಯಕ್ತಿತ್ವವನ್ನು ನೋಡಲು ಸಾಧ್ಯವಾಗಿದೆ. ಇದಕ್ಕೆ ಪಾಶ್ಚಾತ್ಯ ಶಿಕ್ಷಣ ಮುಖ್ಯ ಕಾರಣ. ಅಂದು 'ಹೆಣ್ಣು' ಎಂದರೆ ಹೀಗೇ ಇರಬೇಕೆಂದಿದ್ದ ಮಾದರಿ ಇಂದು ಬದಲಾಗಿದೆ. ಇಲ್ಲಿ ಏನಿದ್ದರೂ ತಾನು ತನ್ನದು ಎನ್ನುವ ಹೊಸ ಮಾರ್ಗ ಅಸ್ತಿತ್ವವನ್ನು ಪಡೆದುಕೊಂಡಿದೆ. ಅಂದು ಇದ್ದ ಸಂಸ್ಕೃತಿ ಇಂದು ಕೆಲವು ಕಡೆ ಗೌಣವಾದರೆ; ಮತ್ತೆ ಕೆಲವು ಕಡೆ ಇನ್ನೂ ಜೀವಂತವಾಗಿದೆ ಎನ್ನುವುದನ್ನು ಈ ಎರಡು ಆತ್ಮಕಥನಗಳ ಮೂಲಕ ಎರಡು ಬಗೆಯ ಮುಖಗಳನ್ನು ನೋಡುವ ಪ್ರಯತ್ನವನ್ನು ಮಾಡಿದ್ದೇನೆ.

೨೦೧೨ ಏಪ್ರಿಲ್ ತಿಂಗಳಿನಲ್ಲಿ ಹೊರಬಂದಿರುವ ಪ್ರತಿಭಾ ನಂದಕುಮಾರ್ ಹಾಗೂ ಭಾರ್ಗವಿ ನಾರಾಯಣ್‌ರವರ ಎರಡು ಆತ್ಮಕಥನಗಳನ್ನು ಕುರಿತು ನಾನು ಹೇಗೆ ತೌಲನಿಕವಾಗಿ ಆಲೋಚನೆ ಮಾಡಲು ಸಾಧ್ಯ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಬಯಸುತ್ತೇನೆ. ನನ್ನ ಅಧ್ಯಯನದ ನಿಜವಾದ ಶೋಧನೆಯ ನೆಲೆಗಟ್ಟು ಇಲ್ಲಿ ಅಭಿವ್ಯಕ್ತವಾಗಿದೆ.

---

[39].Modernity, postmodernity and neo-sociological theories - S.L.Doshi- page-49

ಪ್ರತಿಭಾ ಹಾಗೂ ಭಾರ್ಗವಿ ಇವರಿಬ್ಬರ ಹುಟ್ಟು ಒಂದೇ ಶತಮಾನದಲ್ಲಾಗಿದೆ. ಅವರಿಬ್ಬರೂ ಬರೆದಿರುವ ಅವರವರ ಜೀವನವನ್ನು ಕುರಿತ ಅವರ ಆತ್ಮಕಥನಗಳು ಪ್ರಕಟಗೊಂಡಿರುವುದೂ ಒಂದೇ ವರ್ಷದಲ್ಲಿ ಆದರೆ ಅವರಿಬ್ಬರೂ ಭಿನ್ನ-ಭಿನ್ನ ಮನಸ್ಥಿತಿ ಉಳ್ಳಂಥ ಹೆಣ್ಣು ಮಕ್ಕಳು ಎಂಬುದು ಅವರ ಆತ್ಮಕಥನಗಳನ್ನು ಓದುವಾಗ ಭಾಸವಾಗುತ್ತದೆ. ಒಂದು 'ಬರವಣಿಗೆಯ ಮಾಧ್ಯಮ'ವಾದರೆ ಮತ್ತೊಂದು 'ಅಭಿನಯ ಮಾಧ್ಯಮ'ವನ್ನು ಕೇಂದ್ರಿಕರಿಸಿದೆ. ಒಬ್ಬರು ತಮ್ಮ ಇಡೀ ಬದುಕನ್ನು ತಮ್ಮ ಕವಿತಗಳಿಗಾಗಿಯೇ ಮೀಸಲಾಗಿರಿಸಿದರೆ ಮತ್ತೊಬ್ಬರು ತಾವು ಅಭಿನಯಿಸುವ ನಾಟಕಗಳಿಗಾಗಿ ಮೀಸಲಾಗಿರಿಸಿದ್ದಾರೆ.

ನಂದಕುಮಾರ್, ಪ್ರತಿಭಾ ಹಾಗೂ ಅವರಿಬ್ಬರ ಮಕ್ಕಳನ್ನು ಒಳಗೊಂಡ ಆತ್ಮಕಥನ ಒಂದು ಕಡೆಯಾದರೆ; ಕೂಡು ಕುಟುಂಬದ ಒಳಗೆ ಹಲವಾರು ಸಂಬಂಧಗಳ ಬೆಸುಗೆಯೊಂದಿಗೆ ಹೆಣೆದು ಕೊಂಡಿರುವ ಆತ್ಮಕಥನ ಭಾರ್ಗವಿಯವರದಾಗಿದೆ. ಎರಡೂ ಆತ್ಮಕಥನದೊಳಗೆ ಹಲವಾರು ಉಪ ಶೀರ್ಷಿಕೆಗಳನ್ನು ಒಳಗೊಂಡಿರುವ ಸುದೀರ್ಘವಾದ ಭಾಗಗಳಿವೆ. ಸರಳ ಭಾಷಾ ಶೈಲಿಯೊಂದಿಗೆ ಮೂಡಿಬಂದಿರುವ ಆತ್ಮಕಥನಗಳಾಗಿವೆ. ಪ್ರತಿಭಾರವರ ಆತ್ಮಕಥನ ೨೫೩ ಪುಟಗಳನ್ನು ಒಳಗೊಂಡಿದ್ದರೆ; ಭಾರ್ಗವಿಯವರು ಆತ್ಮಕಥನ ೪೧೩ ಪುಟಗಳನ್ನು ಒಳಗೊಳ್ಳುವುದರ ಜೊತೆಗೆ ಹಳೆಯ ನೆನಪುಗಳನ್ನು, ಆಗಿನ ರಂಗ ಪ್ರಪಂಚದ ಕೆಲವು ನೆನಪುಗಳನ್ನು ನೆನಪಿಸುವ ಫೋಟೊಗಳನ್ನು ಒಳಗೊಂಡಿದೆ. ಅದರೊಂದಿಗೆ ಅಮ್ಮ ಹಾಗೂ ಅತ್ತೆ ಮನೆಯ ಕುಟುಂಬಗಳ ವಂಶವೃಕ್ಷವನ್ನೂ ಅಡಗಿಸಿಕೊಂಡಿದೆ.

ಭಾರ್ಗವಿ ನಾರಾಯಣ್ ಅವರು ಭಾರತೀಯ ಸಂಸ್ಕೃತಿ, ಸಂಸ್ಕಾರ, ಸಂಪ್ರದಾಯ, ಪರಂಪರೆಯನ್ನು ಮೀರಿ ನಡೆಯದ ಹೆಣ್ಣು ಮಗಳಾಗಿದ್ದು ಸಾಮಾಜಿಕ-ಧಾರ್ಮಿಕ ಮೌಲ್ಯಗಳ ಬದ್ಧತೆಗೆ ಒಳಗಾದವರಂತೆ ಕಂಡು ಬಂದರೆ, ಪ್ರತಿಭಾ ತಾನು ಹುಟ್ಟಿದ್ದೇನೆ, ನಾನು ಬದುಕಬೇಕು, ನನಗೆ ಹೇಗೆ ಬೇಕೋ ಹಾಗೇ ಬದುಕುತ್ತೇನೆ, ನನಗೆ ನನ್ನದೇ ಆದ ಒಂದು ಸಂಸ್ಕಾರ ಇದೆ. ನಾನು ಬೇರೆ ಸಂಸ್ಕಾರಗಳಿಗೆ ಬದ್ಧಳಲ್ಲ ಎನ್ನುತ್ತಾ ತನ್ನದೇ ಆದ ಮಾರ್ಗವನ್ನು ನಿರ್ಮಾಣ ಮಾಡುತ್ತೇನೆಂದು ಹೊರಟವರಾಗಿ ಕಾಣಿಸುತ್ತಾರೆ.

ಪ್ರತಿಭಾ ಅವರ ಆತ್ಮಕಥನ ಹಲವು ಪ್ರಶ್ನೆಗಳನ್ನು ಪ್ರಚೋದಿಸಿದರೆ, ಭಾರ್ಗವಿಯವರ ಆತ್ಮಕಥನ ಒಂದು ಅಪ್ಪಟ ಮಧ್ಯಮ ವರ್ಗದ ಹೆಣ್ಣಿನ ನಡೆಯನ್ನು ತಿಳಿಸುತ್ತದೆ. ಇಲ್ಲಿ ಈಕೆಗೆ ಗಂಡನ ಕಿರುಕುಳವಾಗಲೀ, ಯಾವುದೇ ಆಘಾತವಾಗಲಿ ಇಲ್ಲ ಬದಲಿಗೆ ಒಂದು ನೆಮ್ಮದಿಯ ಬದುಕು ಇವರದಾಗಿ, ಇಬ್ಬರೂ ಲೇಖಕಿಯರ ಹುಟ್ಟಿನ ಪರಿಸರ, ಅವರ ಕೌಟುಂಬಿಕ ವ್ಯವಸ್ಥೆ,

ಶಿಕ್ಷಣ, ಅನುಭವ ಗುಣಗಳು ಅವರ ವ್ಯಕ್ತಿತ್ವದ ಮೇಲೆ ತನ್ನದೇ ಆದಂತಹ ಪ್ರಭಾವಗಳನ್ನು ಬೀರಿದೆ.

ಭಾರ್ಗವಿ ನಾರಾಯಣ್‌ಅವರಿಗೆ ಬಾಲ್ಯದಿಂದಲೇ ನಾಟಕ ಮಾಡುವ ಹವ್ಯಾಸವಿದ್ದರೆ; ಪ್ರತಿಭಾರವರ ಕಾವ್ಯರಚನೆಯ ಸೊಗಡಿಗೆ ಲೋಕದ ಅನುಭವ ಕಾರಣವಾಗಿದೆ. ಬಿ.ಎಸ್.ಸಿ. ಓದಿರುವ ಭಾರ್ಗವಿ, ಎಂ.ಎ. ಎಂ.ಫಿಲ್ ಮಾಡಿರುವ ಪ್ರತಿಭಾ ಇಬ್ಬರೂ ವಿದ್ಯಾವಂತರು. ಭಾರ್ಗವಿನಾರಾಯಣ್ ಯಾವುದೇ ಮೌಲಿಕ ಸಂಘರ್ಷಕ್ಕೆ ಒಳಗಾದವರಲ್ಲ ಇವರ ಬದುಕು ಸಂತೋಷದ, ಸಂತಸದ, ಸಾಂಸಾರಿಕ ಬದುಕಾಗಿತ್ತು. ಯಥಾವತ್ತಾಗಿ ಎಲ್ಲವನ್ನೂ ಒಪ್ಪಿಕೊಂಡು ಹಾಗೇ ಅನುಸರಿಸಿಕೊಂಡು ಭಾರತೀಯ ಸಂಸ್ಕೃತಿಯ ಪರಂಪರೆಯ ಜೊತೆ-ಜೊತೆಯಲ್ಲೇ ಹೆಜ್ಜೆ ಹಾಕಿದ್ದರಿಂದ ಈಕೆ ಯಾವುದೇ ಸಂಘರ್ಷಕ್ಕೆ ಸಿಲುಕಿಕೊಂಡಿಲ್ಲ. ಪ್ರತಿಭಾ ಸ್ಥಾಪಿತವಾದ ಸಾಮಾಜಿಕ ಮೌಲ್ಯಗಳನ್ನು ಒಪ್ಪಿಕೊಳ್ಳಲು ನಿರಾಕರಿಸಿದ್ದರಿಂದ ಅನೇಕ ಸಂರ್ಘರ್ಷಗಳನ್ನು ಎದುರಿಸುತ್ತಾರೆ.

ಭಾರ್ಗವಿ ತಾನು, ತನ್ನ, ಮನೆ, ತನ್ನ ಗಂಡ, ತನ್ನ ಮಕ್ಕಳು ಹಾಗೂ ತನ್ನ ರಂಗಭೂಮಿ ಇವುಗಳ ಬಗ್ಗೆ ಮಾತ್ರ ಆಲೋಚಿಸುತ್ತಿದ್ದರು. ಪಿತೃಪ್ರಧಾನ ವ್ಯವಸ್ಥೆ ಕೇವಲ ತನ್ನ ಕುಟುಂಬ ಮತ್ತು ತನ್ನ ಪತಿಗಷ್ಟೇ ನಿಷ್ಠಳಾಗಿರಬೇಕೆಂಬುದನ್ನು ಸಾಂಪ್ರದಾಯಿಕ ಮೌಲ್ಯಗಳು ಬಯಸುತ್ತದೆ. ಇಲ್ಲಿ ಈ ವ್ಯವಸ್ಥೆಯ ಪ್ರತಿನಿಧಿಯಾಗಿ ಭಾರ್ಗವಿನಾರಾಯಣ್ ಕಂಡು ಬಂದರೆ ಈ ವ್ಯವಸ್ಥೆಯನ್ನು ಪ್ರಶ್ನಿಸುವ ಹೆಣ್ಣಾಗಿ ಪ್ರತಿಭಾ ಕಂಡು ಬರುತ್ತಾರೆ.

ಭಾರ್ಗವಿ ತನ್ನ ಪತಿಯಾದ ನಾರಾಯಣ್‌ಅವರೊಂದಿಗೆ ೫೦ ವರ್ಷಗಳ ಕಾಲ ಸುದೀರ್ಘವಾದ ನೆಮ್ಮದಿಯ ಜೀವನ ನಡೆಸಿದ್ದಾರೆ. ಭಾರ್ಗವಿ ಮದುವೆಗೂ ಮುನ್ನ ತಮ್ಮನ್ನು ತಾವು ಗಂಡು ಪಾತ್ರ ಮಾಡಲೆಂದೇ ಇರುವ 'ಗಂಡುಬೀರಿ' ಎಂದು ಕರೆದು ಕೊಳ್ಳುವುದರಲ್ಲೇ ಖುಷಿ ಪಡುತ್ತಿದ್ದರು. ಆದರೆ ಮದುವೆಯಾದ ನಂತರ ಸೌಮ್ಯ ಸ್ವಭಾವದ, ಗಂಡನ ಸಹಚರಣಿಯಾಗಿ ಇಷ್ಟು ವರ್ಷಗಳ ಕಾಲ ಸಾಂಸಾರಿಕ ಬದುಕನ್ನು ಮುಗಿಸಿರುವುದು 'ವಿವಾಹ' ಎಂಬ ಸಂಸ್ಥೆ ಹೆಣ್ಣನ್ನು ಹೇಗೆ ಬದಲಾಯಿಸುತ್ತದೆ ಎಂಬುದನ್ನು ನೋಡಬಹುದಾಗಿದೆ.

ಪ್ರತಿಭಾ ತನ್ನ ಗಂಡನನ್ನು ಉಳಿಸಿಕೊಳ್ಳಲು ನಡೆಸುವ ಹೋರಾಟದಲ್ಲೇ ನಿಜವಾದ ವ್ಯಕ್ತಿತ್ವದ ಪರಿಚಯವಾಗುತ್ತದೆ. ಎಲ್ಲಾ ಸನ್ನಿವೇಶಗಳಲ್ಲೂ ಆಕೆಯ ಗಟ್ಟಿತನದ ಪರಿಚಯ

ನಮಗಾಗುತ್ತದೆ. ಭಾರ್ಗವಿನಾರಾಯಣ್‌ಅವರ ಮೃದು ಸ್ವಭಾವದ ಪರಿಚಯ ಆತ್ಮ ಕಥನವನ್ನು ಓದುವ ಸಂಧರ್ಭದಲ್ಲಿ ತಿಳಿಯುತ್ತದೆ.

ಪ್ರತಿಭಾಅವರ ಆತ್ಮಕಥನ ಹೆಲ್ಸಿಂಕಿ ಪ್ರವಾಸದೊಂದಿಗೆ ಅಂತ್ಯವಾದರೆ ಭಾರ್ಗವಿಯವರ ಆತ್ಮಕಥನ ಮಗನೊಂದಿಗೆ ಹೋದ ಅಮೇರಿಕಾ ಪ್ರಯಾಣದೊಂದಿಗೆ ಅಂತ್ಯವಾಗುತ್ತದೆ. ಈ ಎರಡು ಸನ್ನಿವೇಶಗಳಲ್ಲಿ ಭಾರ್ಗವಿ ತನ್ನ ಸಂಸಾರವನ್ನು ಬಿಡದೇ ಅದರೊಂದಿಗೆ ಅಂಟಿಕೊಂಡಿರುವುದನ್ನು ಪ್ರತಿಭಾ ಸಂಸಾರದ ಆಚೆಗೆ ತನ್ನ ವ್ಯಕ್ತಿತ್ವವನ್ನು ವಿಸ್ತರಿಸಿಕೊಳ್ಳುತ್ತಾ ಹೋಗುವುದನ್ನು ನೋಡಬಹುದು. ಹೆಣ್ಣು ನಾಟಕ, ಸಿನಿಮಾ ರಂಗದಲ್ಲಿ ಅಭಿನಯಿಸಿದರೆ ಕೆಟ್ಟು ಹೋಗುತ್ತಾಳೆಂಬ ಕಾಲದಲ್ಲೇ ಹಲವು ನಾಟಕಗಳನ್ನು ಮಾಡಿ ಜೊತೆಗೆ ಸಿನಿಮಾ ರಂಗದಲ್ಲೂ ಅಭಿನಯಿಸಿದರು ಭಾರ್ಗವಿ. ಈ ಸಮಾಜದಲ್ಲಿ ಆಕೆ ಕಲಾವಿದೆಯಾಗಿ, ನಟಿಯಾಗಿ, ಹೆಂಡತಿಯಾಗಿ, ತಾಯಿಯಾಗಿ, ತಂಗಿಯಾಗಿ, ಮಗಳಾಗಿ, ಸರ್ಕಾರಿ ನೌಕರಳಾಗಿ ಬದುಕಿದರೂ ತನ್ನ ಇರುವಿಕೆಯನ್ನು ನಾರಾಯಣ್‌ರವರೊಂದಿಗೆ ಕಂಡುಕೊಂಡಿದ್ದರು.

"ನಾನು, ಭಾರ್ಗವಿ" ಎಂಬ ಶೀರ್ಷಿಕೆಯೇ ತನ್ನ ತನವನ್ನು ಹೇಳುತ್ತಿದೆ. 'ನಾನು' ಎಂಬುದೇ ಇಲ್ಲಿ ಕೇಂದ್ರೀಕರಣವಾದಾಗ 'ಭಾರ್ಗವಿ' ಎಂಬ ನಾಮವಾಚಕದಲ್ಲಿ ಅನೇಕ ಸ್ಥಿತಿಗಳನ್ನು ವಿಸ್ತರಿಸಿಕೊಳ್ಳುತ್ತಾ ಹೋಗುವುದನ್ನು ಕಾಣಬಹುದು. ಭಾರತೀಯ ಸಂಪ್ರದಾಯದ ಮನೋಭೂಮಿಕೆ, ಸಂಸ್ಕಾರ, ಸಂಸ್ಕೃತಿ ಎಲ್ಲವೂ ಇವರ ಮುಖದಲ್ಲೇ ಕಾಣುವಂತಹ ಭಾವಚಿತ್ರವನ್ನು ಭಾರ್ಗವಿರವರ ಆತ್ಮಕಥನದ ಮುಖಪುಟದಲ್ಲಿ ನೋಡಬಹುದಾಗಿದೆ.

'ಹಿಂದಣ ಹೆಜ್ಜೆಯನ್ನು ಇರಿಸಿದ್ದಲ್ಲದೇ ಮುಂದಣ ಹೆಜ್ಜೆಯನ್ನು ಇರಿಸಲಾಗದು' ಎಂಬ ಅಲ್ಲಮರ ವಚನದಂತೆ ಅನುದಿನದ ಅಂತರಗಂಗೆಯಲ್ಲಿ ಪ್ರತಿಭಾ ತಮ್ಮ ಜೀವನದ ಅನುಭವಗಳಿಗೆ ತಕ್ಕಂತೆ ಆಕೆ ಪ್ರತಿಕ್ರಿಯಿಸುತ್ತಾ ಹೆಜ್ಜೆ ಇಟ್ಟಿರುವುದನ್ನು ನೋಡಬಹುದಾಗಿದೆ. ತನ್ನ ಅನುಭವಗಳೇ ಸತ್ಯ, ತನ್ನ ಹುಡುಕಾಟವೇ, ಸರಿ, ತಾನು ಮಾಡುತ್ತಿರುವುದೇ ಸರಿ ಎನ್ನುವ ತುಡಿತದ ಹೊಸ-ಹೊಸ ಆಯಾಮದೆಡೆಗೆ ನಡೆದ ಪ್ರತಿಭಾ ಹಲವು ಸಂಘರ್ಷದೊಂದಿಗೆ ಸಿಲುಕಿಕೊಂಡಿರುವುದನ್ನು ನೋಡಬಹುದಾಗಿದೆ. ಇವರ ಆತ್ಮಕಥನದ ಮುಖಪುಟದಲ್ಲಿರುವ ಭಾವಚಿತ್ರ ತಮ್ಮ ಅಸ್ಮಿತೆಯ ಹುಡುಕಾಟದತ್ತ ಚಲಿಸುತ್ತಿರುವ ರೀತಿಯಲ್ಲಿ ಕಂಡುಬಂದಿದೆ.

ವೈಚಾರಿಕತೆ ಉಳ್ಳ ಚಿಂತನೆಗೆ ಪೋಷಕವಾದಂತಹ ಸಾಹಿತ್ಯದ ಪ್ರಕಾರಗಳಾದ ಕವಿತೆಗಳಲ್ಲಿ ತಮ್ಮ ನೋವು, ದುಃಖ, ದುಮ್ಮಾನಗಳನ್ನು ಭಾಷೆಯ ಮೂಲಕ ಸೃಷಿಸಿದವರು

ಪ್ರತಿಭಾ. ಸಂಚಾರವಾಗಬಲ್ಲಂತಹ ಭಾವಸಂಲಗ್ನದ ಪ್ರಕ್ರಿಯೆಗಳನ್ನು ನಟನೆ, ಅಭಿನಯ, ಆಂಗಿಕ ಭಾವಾಭಿವ್ಯಕ್ತಿಯ ರಂಗದಲ್ಲಿ ಅಳವಡಿಸಿಕೊಂಡ ಅಭಿನೇತ್ರಿಯಾಗಿ ಕಲಾಜಗತ್ತಿಗೆ ಶ್ರೀಮಂತ-ಧೀಮಂತ ಸ್ತ್ರೀತನದ ಅಸ್ಮಿತೆಗೆ ಮಾದರಿಯಾಗಿದ್ದಾರೆ.

"ಎಲ್ಲಿಯೊ ವನಸುಮದಂತೆ ಹುಟ್ಟಿ ಬೆಳೆದರೂ, ಅಯಾಚಿತವಾಗಿ ಬಂದುವು ಸಕಲ ಸೌಭಾಗ್ಯಗಳು, ಸುತ್ತಮುತ್ತಲ ಜನ, ಹುಟ್ಟಿದ, ಸೇರಿದ ಮನೆಯವರೆಲ್ಲರೂ ನನಗೆ ಹಿತವನ್ನು ತೋರಿದಂತವರೇ. ಅವರೆಲ್ಲರಿಗೂ ನಾನು ಋಣಿ. ಸ್ನೇಹಿತರು, ಶಾಲಾಕಾಲೇಜಿನ ಅಧ್ಯಾಪಕವರ್ಗ, ಅಮ್ಮ ಎಲ್ಲರ ಪ್ರಭಾವ ನನ್ನ ಮೇಲಿದೆ"[೪೦]. ಎಂದು ಆತ್ಮಕಥನದ ಅಂತ್ಯದಲ್ಲಿ ಹೇಳುವ ಭಾರ್ಗವಿ ೭೦ರ ದಶಕದಲ್ಲೇ 'ಸ್ವಾತಂತ್ರ್ಯ' ಎಂದು ಗಟ್ಟಿಯಾಗಿ ಚೀರದೆಯೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿದ್ದರು ಎಂಬುದನ್ನು ಆತ್ಮಕಥನದೊಳಗೆ ನೋಡಬಹುದಾಗಿದೆ.

ಮೂಲತಃ ಕವಿಯತ್ರಿಯಾಗಿರುವ ಪ್ರತಿಭಾ ಫ್ರೆಂಚ್ ಸಂಪ್ರದಾಯದ ಕವನದೊಂದಿಗೆ ತಮ್ಮ ಆತ್ಮಕಥನವನ್ನು ಅಂತ್ಯಗೊಳಿಸಿದ್ದಾರೆ. ಈ ಸಂಪ್ರದಾಯ 'ಹೆಣ್ಣೊಬ್ಬಳು ಸತ್ತಾಗ ಅವಳ ಪ್ರಿಯಕರರು ಶವ ಸಂಸ್ಕಾರಕ್ಕೆ ಬರಬೇಕು ಮತ್ತು ಸ್ಮಶಾನದಲ್ಲಿ ಜಗಳ ಆಡಬಾರದು' ಎಂದು ಹೇಳುತ್ತದೆ. 'ಶವ ಸಂಸ್ಕಾರಕ್ಕೆ ಆಹ್ವಾನ' ಎಂಬ ಕವನದಲ್ಲಿ ಪ್ರತಿಭಾ ತಮ್ಮ ಬದುಕಿನ ಪ್ರತಿ ಕ್ಷಣಗಳನ್ನು, ಪ್ರತಿ ಘಟನೆಗಳನ್ನು ಕಾವ್ಯದ ಲೇಪನದೊಂದಿಗೆ ಹಿಡಿದಿಟ್ಟಿದ್ದಾರೆ. ಈ ಕೃತಿಯಲ್ಲಿರುವ ಕಾವ್ಯವೊಂದನ್ನು ಈ ಕೆಳಗಿನಂತೆ ನೋಡಬಹುದು.

**'ಶವ ಸಂಸ್ಕಾರಕ್ಕೆ ಆಹ್ವಾನ'**

"ಬನ್ನಿ ಎಲ್ಲರೂ ನನ್ನ ಶವ ಸಂಸ್ಕಾರಕ್ಕೆ
ಯಾವುದೋ ಒಂದು ಋಣ ತೀರಿಸುವುದಕ್ಕೆ

ಅರಬೆಂದ ದೇಹಕ್ಕೆ ಕೊಡಲು ಪೂರ್ಣ ಬೆಂಕಿ
ಅವರವರ ಭಾವಕ್ಕೆ ತಕ್ಕಂತೆ ಪರಿತಪಿಸಿ

ಕಲಿಸಿದಿರಿ ಮೇಷ್ಟ್ರೇ ಕಾಳಿದಾಸನ ಕಾವ್ಯ
ಪಾಠಕ್ಕೆ ಮಾತ್ರ ಮೊದಲ ಪ್ರೇಮದ ಪರಿ
ಪ್ರಥಮದಲ್ಲೇ ಭಗ್ನ ಮೊಳಕೆಯೊಡೆಯದ ರೀತಿ

ಎರಡನೆಯ ಛಿದ್ರ ಸಹಪಾಠಿಯ ಉದಾಸೀನ
ಕಾವ್ಯಕ್ಕೆ ಮೀಸಲು ಅವನ ಪ್ರೀತಿ ಸ್ಪರ್ಶಕ್ಕಲ್ಲ

---

[40] ನಾನು, ಭಾರ್ಗವಿ, ಪು.೪೦೯

ಬಯಕೆ ಕದಡಿ ಬಯಲಲ್ಲಿ ಬಿಸಾಡಿ ನಡೆದ ದಾರಿಹೋಕ

ಫಕೀರನ ಪ್ರೀತಿ ನಡುಹಗಲ ತಂಗಾಳಿ
ಉನ್ಮತ್ತ ಕರಡಿ ಅವನು ನಾನು ಮರದ ಹೆಜ್ಜೇನು
ಹತ್ತಲಾಗದು ಕಿತ್ತಲಾಗದು ಬರಿ ಕಣ್ಣೋಟ ಬಾಯಿ ಜೊಲ್ಲು

ಸ್ಮಶಾನ ವೈರಾಗ್ಯದುತ್ತುಂಗದಲ್ಲಿ ಸಿಕ್ಕ ಅವನು ಅವತಾರಿ
ಮರಳಿ ಚಿಗುರಿಸಿ ಪ್ರಣಯ ಮರುಕಳಿಸಿ ಇನ್ನೇನು ಗುರಿ
ತಲುಪುವಷ್ಟರಲ್ಲಿ ನಡೆದ ಹಿಡಿದು ಬೇರೆಯೇ ಜಗದ ದಾರಿ

ಕೊನೆಯ ಘಟ್ಟದ ಸವಾರಿ ಪೂರ್ಣ ಫಲಕಾರಿ
ಪಡೆದರೂ ಬಿಟ್ಟರೂ ಹೀಗೆ ಎನ್ನುವ ತೃಪ್ತಿ ಎನ್ನುವಷ್ಟರಲ್ಲಿ
ಮಂಜು ಸರಿದು ನಾನಾಗಿದ್ದೆ ಬಲಿಪಶು ಎಂದು ತೋರಿ

ಮುಳುಗುತ್ತಿದ್ದ ಗಳಿಗೆ ಹಿಡಿದೆತ್ತಿದ ಜೊತೆಗಾರ
ಸಪ್ತಪದಿಯಲ್ಲಿ ಹಿಂದೆ ಒಂದಾಗಿದ್ದ ನಿಜ ಪ್ರೀತಿ
ಚಿತೆಗೆ ಅಗ್ನಿಸ್ಪರ್ಶಕ್ಕೆ ಅವನೊಬ್ಬನಿಗೇ ಅಧಿಕಾರ

ಹಳೆಯ ನೆನಪಲ್ಲಿ ಬನ್ನಿ ನೋಡಲು ನನ್ನ
ದಹಿಸುತ್ತಿದೆ ಜೊತೆಗೇ ಅಗ್ನಿ ಎಲ್ಲ ಕವನ”[೪೧].

[41] ಅನುದಿನದ ಅಂತರಗಂಗೆ, ಪು.೨೫೨, ೨೫೩

## 'ಆಧುನಿಕತೆಯ ಎರಡು ಮುಖಗಳು'– ಈ ಅಧ್ಯಾಯದ ಗ್ರಹೀತಗಳು :

೧. ಒಂದು 'ಅಭಿವ್ಯಕ್ತಿ ಮಾಧ್ಯಮ'ವಾದರೆ ಮತ್ತೊಂದು 'ಅಭಿನಯ ಮಾಧ್ಯಮ'ವಾಗಿದೆ. ಈ ಎರಡು ಕಥನಗಳ ಮೂಲಕ ಸಂಸ್ಕೃತಿಯ ಅಧ್ಯಯನವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

೨. ಎರಡು ಆಧುನಿಕ ಪರಿಸರದೊಳಗಿರುವ ಮೌಲ್ಯಗಳು ಸಂಪ್ರದಾಯಗಳು, ಸಂಘರ್ಷಗಳು, ಹೇಗೆ ಒಂದು ವಲಯದಿಂದ ಮತ್ತೊಂದು ವಲಯಕ್ಕೆ ಭಿನ್ನವಾಗಿರುತ್ತದೆ. ಎಂಬುದರ ತೌಲನಿಕ ಅಧ್ಯಯನ ಇಲ್ಲಿದೆ.

೩. ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧವಾಗಿ ನಡೆದ ಪ್ರತಿಭಾ ಹಲವು ಸಂಘರ್ಷದೊಂದಿಗೆ ಸಿಲುಕಿಕೊಂಡರೆ, ಭಾರ್ಗವಿ ಪಿತೃಪ್ರಧಾನ ವ್ಯವಸ್ಥೆಯೊಂದಿಗೆ ಹೆಜ್ಜೆ ಹಾಕಿ ಯಾವ ಸಂಘರ್ಷಕ್ಕೂ ಸಿಲುಕಿ ಕೊಳ್ಳದೇ ಇರುವುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

೪. ಆಧುನಿಕ ಪರಿಸರದಲ್ಲಿ ಬದುಕುತ್ತಿರುವ ಪ್ರತಿಭಾ ಹಾಗೂ ಭಾರ್ಗವಿಯವರ ವ್ಯಕ್ತಿತ್ವದ ಅನಾವರಣ ಈ ಅಧ್ಯಾಯದಲ್ಲಿದೆ.

# ಅಧ್ಯಾಯ-೫ ಸಮಾರೋಪ

ಪ್ರತಿಭಾ ನಂದಕುಮಾರ್ ಅವರ 'ಅನುದಿನದ ಅಂತರಗಂಗೆ' ಹಾಗೂ ಭಾರ್ಗವಿ ನಾರಾಯಣ್ ಅವರ 'ನಾನು, ಭಾರ್ಗವಿ' ಎರಡು ಆತ್ಮಕಥನಗಳು ಈ ಅಧ್ಯಯನದ ವಿಷಯಗಳಾಗಿವೆ. ಮಹಿಳಾ ಜಗತ್ತಿನ ಸಂಸ್ಕಾರ, ಸಂಸ್ಕೃತಿ, ಕುಟುಂಬ ವ್ಯವಸ್ಥೆ ಮುಂತಾದ ವಿಷಯಗಳ ದಾಖಲೆ ಇಲ್ಲಿದೆ. 'ಕುಟುಂಬ' ಎಂಬ ವ್ಯವಸ್ಥೆಯೊಳಗೆ ಲೇಖಕಿಯರ ಬದುಕಿನ ಅನುಭವಗಳು ದಾಖಲಾಗಿದ್ದು ತಮಗೆ ಅನಿಸಿದ್ದೆಲ್ಲವನ್ನು ಆತ್ಮಕಥನದೊಳಗೆ ಅಕ್ಷರ ರೂಪಕ್ಕಿಳಿಸಿದ್ದಾರೆ. ಕುಟುಂಬದ ನಡುವೆ ಹಾಗೂ ಸಮಾಜದಲ್ಲಿ ಏರ್ಪಟ್ಟ ಹಲವು ಅನುಭವಗಳನ್ನು, ಘಟನೆಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಕಷ್ಟದ ದಿನಗಳಲ್ಲೂ ನಡೆಸಿದ ಹೋರಾಟ ಓದುಗನಿಗೆ ಸ್ಫೂರ್ತಿಯನ್ನು ನೀಡುತ್ತದೆ.

'ಆಧುನಿಕ ಪರಿಸರ' ಹೆಣ್ಣಿನ ವ್ಯಕ್ತಿ ಸ್ವಾತಂತ್ರ್ಯ, ಹೆಣ್ಣು ಮತ್ತು ಸಮಾಜದ ಸಂಬಂಧದ ಸ್ವರೂಪವನ್ನು ಶೋಧಿಸುತ್ತದೆ. ಪ್ರತಿಯೊಂದು ಹೆಣ್ಣು ಆಧುನಿಕತೆಯನ್ನು ತನ್ನ ಜೀವನದೊಳಗೆ ಅಳವಡಿಸಿಕೊಳ್ಳುವ ಮೂಲಕ ತನ್ನ ಅಸ್ಮಿತೆಯನ್ನು ಹೇಗೆ ಕಂಡುಕೊಂಡಿದ್ದಾರೆ ಎಂಬುದನ್ನು ಗ್ರಹಿಸಬಹುದಾಗಿದೆ.

ಸ್ತ್ರೀಯರು ಬರೆಯುವ ಆತ್ಮಕಥನಗಳಿಗೂ ಪುರುಷರು ಬರೆಯುವ ಆತ್ಮಕಥನಗಳಿಗೂ ಇರುವ ವ್ಯತ್ಯಾಸ ಹಾಗೂ ಆ ಮೂಲಕ ಏರ್ಪಡುವ ಸಾಂಸ್ಕೃತಿಕ ರಾಜಕಾರಣಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. 'ವಿವಾಹ' ಮಾತ್ರವೇ ಹೆಣ್ಣಿನ ಸಾಮಾಜಿಕ ಅಸ್ಮಿತೆಯನ್ನು ಧೃಢಪಡಿಸುವ ವ್ಯವಸ್ಥೆಯೇ ಎಂಬುದರ ಚರ್ಚೆಯೂ ಇಲ್ಲಿದೆ. 'ಕುಟುಂಬ' ಎಂಬ ವ್ಯವಸ್ಥೆ ಮಹಿಳೆಯ ಶೋಷಣೆಗೆ ಪ್ರಧಾನ ಕೇಂದ್ರವೇ? ಅದನ್ನು ಬಿಟ್ಟು ಹೆಣ್ಣು ಬದುಕಲು ಸಾಧ್ಯವಿಲ್ಲವೆ? 'ಲೈಂಗಿಕ ಸಂಬಂಧ' ಎನ್ನುವುದು ಕೇವಲ ಕೌಟುಂಬಿಕ ಚೌಕಟ್ಟಿಗೆ ಮಾತ್ರ ಸೀಮಿತವೇ? ಅದು ಕುಟುಂಬದಾಚೆಗೆ ತನ್ನ ನೆಲೆಯನ್ನು ಕಂಡುಕೊಳ್ಳಲು ಕಾರಣಗಳೇನು? 'ಪಿತೃಪ್ರಧಾನ ವ್ಯವಸ್ಥೆ'ಯಲ್ಲಿ ಹೆಣ್ಣಿಗೆ ಹೇಳಿಕೊಟ್ಟಿರುವ ನಿಯಮಗಳೇನು? ಅಲ್ಲಿ ಗಂಡಸರಿಗೆ ಅನುಕೂಲವಾಗಿರುವಂತಹ ನೀತಿ-ನಿಯಮಗಳೇ ಹೆಚ್ಚಾಗಿರಲು ಕಾರಣವೇನು? ಇಂತಹ ಹಲವು ಪ್ರಶ್ನೆಗಳನ್ನು ಈ ಅಧ್ಯಯನದೊಳಗೆ ಗುರುತಿಸಲಾಗಿದೆ.

ಭಾರತೀಯ ಸಾಮಾಜಿಕ ರಚನೆಯ ಒಳಗೇ ಹೆಣೆಯಲ್ಪಟ್ಟಿರುವ ಪಿತೃಪ್ರಾಧನ್ಯತೆ ಮತ್ತು ಪಾರಂಪರಿಕ ಮೌಲ್ಯಗಳು ಆಧುನಿಕ ಪರಿಸರದ ಮೌಲ್ಯಗಳೊಡನೆ ಮುಖಾಮುಖಿಯಾದಾಗ ಏರ್ಪಡುವ ಸಂಘರ್ಷವನ್ನು, 'ಪಿತೃಪ್ರಧಾನ ಸಂಬಧಗಳು ಮಹಿಳಾ ಚಳುವಳಿಗೆ ದಾರಿ ಮಾಡಿಕೊಡುತ್ತವೆ' ಎಂಬುದನ್ನು ಈ ಅಧ್ಯಯನದಲ್ಲಿ ನೋಡಬಹುದಾಗಿದೆ. ಪಿತೃಪ್ರಾಧನ್ಯತೆಯ ಮೌಲ್ಯಗಳನ್ನು ಅಂತರಂಗೀಕರಿಸಿಕೊಂಡಿರುವ ಸಮಾಜವು ಈ ಕಥನದೊಳಗಿರುವ ಜೀವನವನ್ನು ಸಹಿಸುವುದಿಲ್ಲವಾದ್ದರಿಂದ ಪ್ರತಿಭಾರವರ ಹುಡುಕಾಟ ನಿರಾಶೆಯಲ್ಲೇ ಕೊನೆಯಾಗಿರುವುದನ್ನು ಈ ಅಧ್ಯಯನದ ಎರಡನೆ ಅಧ್ಯಾಯದಲ್ಲಿ ಹೇಳಲಾಗಿದೆ.

'ಹೆಣ್ಣು' ನಾಟಕ ರಂಗದಲ್ಲಿ ಯಾವ ಬಗೆಯ ಸಮಸ್ಯೆಗಳನ್ನು ಹಾಗೂ ಸವಾಲುಗಳನ್ನು ಎದುರಿಸಬೇಕಾಗುತ್ತದೆ, ಪರಂಪರೆ, ಸಂಪ್ರದಾಯ, ಪಿತೃಪ್ರಧಾನತೆ ಮುಂತಾದ ಮೌಲ್ಯಗಳಿಗೆ ಎಲ್ಲೂ ನೇರವಾಗಿ ಡಿಕ್ಕಿ ಹೊಡೆಯದೇ ಎಲ್ಲವನ್ನೂ ಸರಿದೂಗಿಸಿಕೊಂಡು ಹೋಗಿರುವ ಜಾಣತನವನ್ನು, ಪಿತೃಪ್ರಧಾನತೆಯ ಕೌಟುಂಬಿಕ ಪರಿಸರದೊಳಗೆ ತನ್ನತನವನ್ನು ಬಿಡದೆ, ಕುಟುಂಬದ ವ್ಯವಸ್ಥೆಗೂ ಧಕ್ಕೆ ಆಗದಂತೆ ಜೀವನ ನಡೆಸಿಕೊಂಡು ಹೋಗುವುದೇ ಯಶಸ್ಸಿನ ಗುಟ್ಟು ಎಂಬುದನ್ನು ಭಾರ್ಗವಿ ಅವರ ಆತ್ಮಕಥನದೊಳಗೆ ಗ್ರಹಿಸಬಹುದಾಗಿದೆ.

"Traditionalism goes hand-in-hand with modernization" ಈ ಹೇಳಿಕೆಯ ವಿವರಣೆ, ಆಧುನಿಕ ಸಾಮಾಜಿಕ ವ್ಯವಸ್ಥೆಕೊಟ್ಟಿರುವ ಸ್ವಾತಂತ್ರ ಮತ್ತು ಸಮಾನತೆಯನ್ನು ತನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಭಾರ್ಗವಿ ಬಳಸಿಕೊಂಡು ಹೆಜ್ಜೆ ಹಾಕಿರುವುದನ್ನು ಇಲ್ಲಿ ನೋಡಬಹುದು. ಸಾಂಪ್ರದಾಯಿಕ ಪರಿಸರದಲ್ಲಿರುವ ಸವಾಲುಗಳೇನು? ಅದನ್ನು ಹೆಣ್ಣು ನಿಭಾಯಿಸಬೇಕಿರುವ ಬಗೆ ಎಂತಹದು? ಎಂಬುದನ್ನು ಈ ಸಂಶೋಧನೆಯಲ್ಲಿ ತಿಳಿಸಲಾಗಿದೆ. ಭಾರ್ಗವಿ ಅವರ ಆತ್ಮಕಥನ ತನ್ನತನವನ್ನು ಎಲ್ಲೂ ಬಿಟ್ಟುಕೊಡದೆ ಸಾಮಾಜಿಕ ವಲಯದಲ್ಲಿ ನಿರಂತರವಾಗಿ ಭಾಗವಹಿಸುತ್ತಲೇ ಯಶಸ್ವಿಯಾಗಿರುವ ಹೆಣ್ಣಿನ ಕಥಾನಕವಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ನೋಡಬಹುದಾಗಿದೆ.

ಈ ಎರಡು ಆತ್ಮಕಥನಗಳಲ್ಲಿ ಒಂದು 'ಬರವಣಿಗೆ ಮಾಧ್ಯಮ'ವಾದರೆ ಮತ್ತೊಂದು 'ಅಭಿನಯ ಮಾಧ್ಯಮ'ವನ್ನು ಕೇಂದ್ರಿಕರಿಸಿಕೊಂಡಿರುವುದನ್ನು, ಎರಡು ಆಧುನಿಕ ಪರಿಸರದೊಳಗಿರುವ ಮೌಲ್ಯಗಳು, ಸಂಪ್ರದಾಯಗಳು, ಸಂಘರ್ಷಗಳು, ಹೇಗೆ ಒಂದು

ವಲಯದಿಂದ ಮತ್ತೊಂದು ವಲಯಕ್ಕೆ ಭಿನ್ನವಾಗಿರುತ್ತದೆ ಎಂಬುದರ ತೌಲನಿಕ ಅಧ್ಯಯನ ಇಲ್ಲಿದೆ.

ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧವಾಗಿ ನಡೆದ ಪ್ರತಿಭಾ ಹಲವು ಸಂಘರ್ಷದೊಂದಿಗೆ ಸಿಲುಕಿಕೊಂಡರೆ, ಭಾರ್ಗವಿ ಪಿತೃಪ್ರಧಾನ ವ್ಯವಸ್ಥೆಯೊಂದಿಗೆ ಹೆಜ್ಜೆ ಹಾಕಿ ಯಾವ ಸಂಘರ್ಷಕ್ಕೂ ಸಿಲುಕಿ ಕೊಳ್ಳದೇ ಇರುವುದನ್ನು ನೋಡುವುದರ ಜೊತೆಗೆ ಆಧುನಿಕ ಪರಿಸರದಲ್ಲಿ ಬದುಕುತ್ತಿರುವ ಪ್ರತಿಭಾ ಹಾಗೂ ಭಾರ್ಗವಿಯವರ ವ್ಯಕ್ತಿತ್ವದ ಅನಾವರಣ ಮಾಡುತ್ತಾ ನನ್ನ ಮಿತಿಯಲ್ಲಿ ನಾನು ಮಾಡಿರುವ ಈ ಅಧ್ಯಯನವನ್ನು ಅದರ ಫಲಿತವನ್ನು ಮಂಡಿಸಿರುತ್ತೇನೆ.

* * * * *

## ಮೂಲ ಆಕರ ಗ್ರಂಥಗಳು


೧. ಪ್ರತಿಭಾನಂದಕುಮಾರ್ : ಅನುದಿನದ ಅಂತರಗಂಗೆ, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ, ೨೦೧೨

೨. ಭಾರ್ಗವಿ ನಾರಾಯಣ್ : ನಾನು, ಭಾರ್ಗವಿ, ಅಂಕಿತ ಪುಸ್ತಕ, ಬೆಂಗಳೂರು, ೨೦೧೨.


## ಪರಾಮರ್ಶನ ಗ್ರಂಥಗಳು


೧. ಆಧುನಿಕ ಕನ್ನಡ ಸಾಹಿತ್ಯ ರೂಪಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೬.

೨. ಆಶಾದೇವಿ : ಸ್ತ್ರೀ ಮತವನುತ್ತರಿಸಲಾಗದೆ?, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ. ೨೦೦೫.

೩. ಕವಿತಾ ರೈ.ಬಿ.ಆರ್. : ಮಹಿಳೆ, ಅಸ್ತಿತ್ವದ ಸಂಕಥನ – ಒಂದು ಪರಿಕಲ್ಪನಾತ್ಮಕ ಅಧ್ಯಯನ, ಸಿಜಿಕೆ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

೪. ಕೋದಂಡ ರಾಮ.ಎನ್.ಕೆ. : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ

೫. ತಿಪ್ಪೇಸ್ವಾಮಿ.ಜಿ.ಆರ್. : ಸಾಹಿತ್ಯ ಮತ್ತು ಕ್ರಿಯಾಶೀಲತೆ

೬. ನೇಮಿಚಂದ್ರ : ಮಹಿಳಾ ಅಧ್ಯಯನ, ಅಂಕಿತ ಪ್ರಕಾಶನ, ೨೦೦೧

೭. ಬರಗೂರು ರಾಮಚಂದ್ರಪ್ಪ(ಸಂ) : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕನ್ನಡ ಸಾಹಿತ್ಯ ಅಕಾಡೆಮಿ, ೨೦೦೬.

೮. ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ, ಶ್ರಮ ಮತ್ತು ಸೃಜನಶೀಲತೆ, ೨೦೦೧

೯. ಬೀಚಿ : ನನ್ನ ಬಯಾಗ್ರಫಿ, ದೀಪಕ್ ಪ್ರಕಾಶನ, ಬೆಂಗಳೂರು–೧, ೨೦೦೨.

೧೦. ಮನುಚಕ್ರವರ್ತಿ.ಎನ್. : ಭಾರತೀಯ ಸ್ತ್ರೀವಾದ.

೧೧. ರಾಮಚಂದ್ರನ್.ಸಿ.ಎನ್. : ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾದೆಮಿ, ೧೯೯೭.

೧೨. ಶಿವರುದ್ರಪ್ಪ.ಜಿ.ಎಸ್. : ವಿಮರ್ಶೆಯ ಪೂರ್ವ ಪಶ್ಚಿಮ

೧೩. ಶಾಲಿನಿ ರಘುನಾಥ : ಸಮನ್ವಿತ, ಹೆಗ್ಗೋಡು ಅಕ್ಷರ ಪ್ರಕಾಶನ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೯೪

೧೪. ಶ್ರೀಮತಿ.ಎಚ್.ಎಸ್. (ಸಂ) : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ.

೧೫. ಸಬಿಹಾ ಭೂಮಿಗೌಡ (ಸಂ) : ಮಹಿಳಾ ಆತ್ಮಕಥೆಗಳು ಅನುಸಂಧಾನ ವಿಚಾರ ಸಂಕೀರ್ಣ, ಕರ್ನಾಟಕ ಸಾಹಿತ್ಯ ಅಕಾದೆಮಿ, ಕನ್ನಡ ಭವನ, ೨೦೦೭

೧೬. ಸಿಮೋನ್ ದಿ ಬುವಾ : ದಿ ಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು, ೨೦೦೭.

೧೭. ಸುಜ್ಞಾನಮೂರ್ತಿ.ಬಿ. : ನಮಗೆ ಗೋಡೆಗಳಿಲ್ಲ– ತೆಲುಗಿನಿಂದ ಕನ್ನಡಕ್ಕೆ, ಲಡ್ಡೈ ಪ್ರಕಾಶನ, ಗದಗ್ ೨೦೦೯

೧೮. ಸುಧಾಸೀತಾರಾಮನ್ : ಮಹಿಳಾ ಅಧ್ಯಯನ ಸಮಾಜಶಾಸ್ತ್ರೀಯ ದೃಷ್ಟಿಕೋನ, ಸ್ತ್ರೀಲೇಖ ಪ್ರಕಾಶನ, ೨೦೦೬

೧೯. ಸುಮಿತ್ರಾಬಾಯಿ.ಬಿ.ಎನ್. ಮತ್ತು ಎನ್. ಗಾಯಿತ್ರಿ : ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಚಾಮರಾಜಪೇಟೆ, ಬೆಂಗಳೂರು ೧ ೧೯೯೫

೨೦. ಸುಮಿತ್ರಾಬಾಯಿ.ಬಿ.ಎನ್ : ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೬

## ಇಂಗ್ಲೀಷ್ ಆಕರ ಗ್ರಂಥಗಳು

1. ಇ.ಪಿ.ಡಬ್ಲೂ ಲೇಖನ – ಎಕನಾಮಿಕ್ ಮತ್ತು ಪೊಲಿಟಿಕಲ್ ವೀಕ್ಲಿ; ಡಿಸೆಂಬರ್ 19, 2009 ವಾಲ್ಯೂಂ–XLIV No.51

2. Andrew Milner and Jeff Browitt : Contemporary cultural theory, third edition, Rawat publications, New Delhi, in India, 2003.

3. S.L.Doshi : Modernity postmodernity and Neo-sociological theories, Rawat publications, Jaipur-04, 2003.

* * * * *

